# ಮತ ಮಾರ್ಪಾಟು
# ದೈವದ್ರೋಹ
# ಮಹಾ ಪಾಪ




ರಚಿತ : ತ್ರಿಮತ ಏಕೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**


**www.thraithashakam.org**





# ಮತ ಮಾರ್ಪಾಟು
# ದೈವ ದ್ರೋಹ
## ಮಹಾ ಪಾಪ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಆಗಸ್ಟ್ –2016

ಪ್ರತಿಗಳು : 1000 **ಬೆಲೆ. 70/–**

## "ಇಂದೂ ಜ್ಞಾನವೇದಿಕೆ" ಪ್ರಚುರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## "ಇಂದೂ ಜ್ಞಾನವೇದಿಕೆ" ಪ್ರಕಟಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ -
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ-
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು-
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು-
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು-
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು-
    ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು
    ಚನಿಪೋಯಾಡಾ? ಚಂಪಬಡ್ಡಾಡಾ?
116. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.



# 'ಇಂದೂ ಜ್ಞಾನವೇದಿಕೆ' ಗ್ರಂಥಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P
Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.
**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A
Cell:9611133635, 9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು (ಪೊ)
ಚಿಕ್ಕಸೂಗುರು (ತಾ), ರಾಯಚೂರು (ಜಿ)
Cell : 98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಬಸವರಾಜ ಅಂಗಡಿ**
(ಸಾ) (ಪೊ) ಪೋತ್ನಾಳ,
(ತಾ) ಮಾನವಿ, ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆಂಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ವಾರ್ಡ್.ನೆಂ. –38,
ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್,
ಬೆಂಗಳೂರು–560066
Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಧಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಮತ ಮಾರ್ಪಾಟು 

## ದೈವ ದ್ರೋಹ

### ಮಹಾ ಪಾಪ

ಮತ ಎನ್ನುವುದು ಈದಿನ ಪ್ರಜೆಗಳಲ್ಲಿ ಕಡಿಯಲಾರದ ಕಲ್ಲಾಗಿ ಏರ್ಪಟ್ಟಿದೆ. ಪ್ರಪಂಚ ಒಟ್ಟಾರೆ ಮತ ಎನ್ನುವ ಮತ್ತಿನಲ್ಲಿ ತೂಗುತ್ತಾ, ತಮ್ಮನ್ನು ತಾವು ಮರೆತುಹೋಗಿ, ನಾನು ನನ್ನ ಮತ ಎಂದುಕೊಳ್ಳುತ್ತಾ, ಪಕ್ಕದವನು ವಾಸ್ತವವಾಗಿ ಯಾವನು ಎಂದು ಆಲೋಚಿಸದ ಸ್ಥಿತಿಯಲ್ಲಿ ಮನುಷ್ಯ ಉಳಿದುಹೋಗಿದ್ದಾನೆ. ಒಂದೇ ಮತದಲ್ಲಿ ಇಬ್ಬರಿದ್ದರೂ, ಅವರಲ್ಲಿ ಒಬ್ಬರಿಗೊಬ್ಬರು ಸ್ವಲ್ಪ ವ್ಯತ್ಯಾಸದಿಂದ ಕಾಣಿಸಿದರೂ, ಆ ಸ್ವಲ್ಪ ವ್ಯತ್ಯಾಸವನ್ನು ಆಧಾರವಾಗಿ ತೋರಿಸುತ್ತಾ, ಅದನ್ನು ಮತದಲ್ಲಿನ ಸೀಳಿಕೆಯಂತೆ ಹೇಳುತ್ತಾ, ಒಬ್ಬರನ್ನೊಬ್ಬರು ಹಿಂಸಿಸಿಕೊಳ್ಳುವ ಪರಿಸ್ಥಿತಿ ಏರ್ಪಡುತ್ತಿದೆ. ಎಲ್ಲಿ ನೋಡಿದರೂ ಮತದಿಂದ ಹಿಂಸೆ ಹೊರತು ಮನುಷ್ಯನಿಗೆ ಏನೂ ಉಳಿದಿಲ್ಲ. ಮನುಷ್ಯರಲ್ಲಿ ಹಿಂಸೆಯನ್ನು ಹೆಚ್ಚಿಸುವ ಮತ ಎನ್ನುವುದು ಸೃಷ್ಠಿ ಆದಿಯಲ್ಲಿ ಇಲ್ಲದಿದ್ದರೂ ಮಧ್ಯದಲ್ಲಿ ಹೇಗೆ ಹುಟ್ಟಿ ಬಂದಿದೆಯೋ ಮತ ಎಂದರೇ ಅರ್ಥವೇನೋ ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ.

ಮತ ಎನ್ನುವುದು ಪೂರ್ತಿ ಸ್ವಚ್ಛವಾದ ತೆಲುಗುಪದ. ಪೂರ್ವದಲ್ಲಿ ಒಬ್ಬ ವ್ಯಕ್ತಿ ಒಂದು ಕೆಲಸವನ್ನು ಮಾಡಿದಾಗ ಹತ್ತು ಜನ ನೋಡಿ ಅದನ್ನು ಒಪ್ಪಿಕೊಳ್ಳುವುದೋ ಅಥವಾ ಒಪ್ಪಿಕೊಳ್ಳದಂತಿರುವುದೋ ನಡೆಯುತ್ತಿತ್ತು. ಒಬ್ಬ ವ್ಯಕ್ತಿ ಮಾಡಿದ ಕೆಲಸ ಒಳ್ಳೆಯದಾದರೇ ಹತ್ತು ಜನ ಅದನ್ನು ಒಪ್ಪಿಕೊಳ್ಳುತ್ತಿದ್ದರು. ನಡೆದ ಕೆಲಸ ಕೆಟ್ಟದಾದರೆ ಅದನ್ನು ಹತ್ತು ಜನ ಸೇರಿ ಒಪ್ಪಿಕೊಳ್ಳದೆ ವಿರೋಧಿಸುತ್ತಿದ್ದರು. ಒಪ್ಪಿಕೊಳ್ಳುವುದು ಅಥವಾ ಒಪ್ಪುವುದು ಎಂಬ ಪದದಿಂದ 'ಓಟು' ಎನ್ನುವ ಪದ ಸಹ ಬಂದಿದೆ. ಪೂರ್ವದಲ್ಲಿ ಒಪ್ಪುವುದನ್ನು ಓಟು ಎಂದು ಅನ್ನುತ್ತಿದ್ದರು. ಅದೇ ಒಪ್ಪುವುದನ್ನು 'ಸಮ್ಮತಿಸುವುದು' ಎಂದು ಸಹ ಅನ್ನುತ್ತಿದ್ದರು. ಸಮ್ಮತಿ ಎಂದರೂ ಒಪ್ಪಿಕೊಳ್ಳುವುದೇ. ಸಮ್ಮತದಲ್ಲಿ 'ಸಂ' ಎನ್ನುವ

ಶಬ್ದವನ್ನು ತೆಗೆದುಹಾಕಿದರೆ, 'ಮತ' ಎನ್ನುವುದು ಮಾತ್ರ ಉಳಿಯುತ್ತದೆ. ಸಮ್ಮತಿ ಎಂದರೂ ಮತ ಎಂದರೂ ಒಂದೇ ಅರ್ಥ ಕೊಡುತ್ತಿದ್ದರೂ ಮನಸ್ಫೂರ್ತಿಯಾಗಿ ಒಪ್ಪಿಕೊಂಡಾಗ ಸಮ್ಮತ ಎನ್ನುವ ಪದವನ್ನು, ಸಾಧಾರಣವಾಗಿ ಒಪ್ಪಿಕೊಂಡಾಗ ಮತ ಎನ್ನುವ ಪದವನ್ನು ಬಳಸುವುದು ನಡೆಯುತ್ತಿತ್ತು. ಒಬ್ಬ ವ್ಯಕ್ತಿ ಲಕ್ಷಾಧಿಕಾರಿ ಆಗುವುದು ನಮಗೆ ಮನಸ್ಫೂರ್ತಿಯಾಗಿ ಅಂಗೀಕಾರವಾದರೇ ಅದನ್ನು ಸಮ್ಮತ ಎನ್ನುತ್ತೇವೆ. ಅದೇ ವ್ಯಕ್ತಿ ಕರ್ಮ ಪ್ರಕಾರ ಭಿಕ್ಷಾಧಿಕಾರಿ ಆಗುತ್ತಾನೆ ಎನ್ನುವ ವಿಷಯದಲ್ಲಿ ಇಷ್ಟ ಇಲ್ಲದಿದ್ದರೂ, ಕರ್ಮವನ್ನು ತಪ್ಪಿಸಲಾರೆವು ಆದ್ದರಿಂದ ತಪ್ಪದೆ ಒಪ್ಪಿಕೊಳ್ಳಬೇಕಾಗಿ ಬರುತ್ತದೆ. ಆಗ ಅದು ಮನಸ್ಫೂರ್ತಿಯಾಗಿ ಒಪ್ಪಿಕೊಳ್ಳುವುದು ಅಲ್ಲ ಆದ್ದರಿಂದ ಅದನ್ನು ಮತ ಎಂದು ಮಾತ್ರ ಅನ್ನುತ್ತೇವೆ.

ಮತ ಎಂದರೆ ಇಷ್ಟೇನಾ ಎಂದು ನೀವು ಯಾರಾದರೂ ಅಂದುಕೊಳ್ಳ ಬಹುದು. ಹೌದು! ಮತ ಎಂದರೆ ಮನುಷ್ಯನೊಳಗೆ ಇಷ್ಟ ಅಯಿಷ್ಟವನ್ನು ಅನುಸರಿಸಿ ಇರುವುದೇ. ಒಬ್ಬ ಮನುಷ್ಯ ತನ್ನ ಬುದ್ಧಿಯಿಂದ ತನ್ನ ಗುಣಗಳಲ್ಲಿನ ಇಷ್ಟ ಅಯಿಷ್ಟಗಳನ್ನು ಗ್ರಹಿಸಿದಾಗ ಇಷ್ಟವಾದರೇ ಮತ ಅಥವಾ ಸಮ್ಮತ ಆಗುತ್ತದೆ. ಅಯಿಷ್ಟವಾದರೆ ಅಸಮ್ಮತ ಅಥವಾ ಅಮತ ಆಗುತ್ತದೆ. ಒಬ್ಬನಿಗೆ ಸಮ್ಮತಿ ಆಗಿರುವುದು ಮತ್ತೊಬ್ಬನಿಗೆ ಸಮ್ಮತಿ ಆಗುತ್ತದೆಂದು ಹೇಳಲಾರೆವು. ಹಾಗಿರುವಾಗ ಮನುಷ್ಯ ಕರ್ಮಪ್ರಕಾರ, ಒಳಗೆ ಬುದ್ಧಿ ಆಲೋಚನೆಯನ್ನನುಸರಿಸಿ ಒಬ್ಬೊಬ್ಬರ ಇಷ್ಟ ಒಂದೊಂದು ವಿಧವಾಗಿ ಇರುತ್ತದೆ. ಎಲ್ಲರ ಇಷ್ಟ ಒಂದೇ ವಿಧವಾಗಿ ಇರುವುದಕ್ಕೆ ಅವಕಾಶ ಇಲ್ಲ. ಈ ವಿಧವಾಗಿ ಮನುಷ್ಯನಲ್ಲಿನ ಸಮ್ಮತವನ್ನೇ ಮತ ಎಂದು ಹೊರಗೆ ಹೇಳಿಕೊಳ್ಳುತ್ತಿದ್ದೇವೆ. ಈಗ ಮತ ಎಂದರೆ ಮನುಷ್ಯನಲ್ಲಿ ಹೇಗೆ ಹುಟ್ಟುತ್ತಿದೆಯೋ ಅರ್ಥವಾಗಿದೆ.

ಮನುಷ್ಯನಲ್ಲಿನ ಸಮ್ಮತ ಒಂದೊಂದು ವಿಷಯದಲ್ಲಿ ಒಂದೊಂದು ವಿಧವಾಗಿ ಇರುತ್ತದೆ. ಉದಾಹರಣೆಗೆ ಮಾಂಸದ ವಿಷಯಕ್ಕೆ ಬಂದರೆ ಅದು

ಆಹಾರ ಪದಾರ್ಥವಾಗಿ ಬಹಳ ಜನರಿಗೆ ಇಷ್ಟವಾಗಿರುವುದೇ. ಆದರೇ ಕೆಲವರಿಗೆ ಮಾತ್ರ ಮಾಂಸ ಎಂದರೆ ಅಯಿಷ್ಟತೆ, ಅಸಮ್ಮತಿಯಾಗಿ ಇರುತ್ತದೆ. ಆಗ ಒಂದು ಮಾಂಸದ ವಿಷಯದಲ್ಲಿ ಎಷ್ಟೋ ಜನಕ್ಕೆ ಇಷ್ಟವಾದರೂ, ಕೆಲವರಿಗೆ ಮಾತ್ರ ಇಷ್ಟ ಇಲ್ಲದಿರುವುದರಿಂದ ಇಷ್ಟ ಇಲ್ಲದವರನ್ನು ಶಾಖಾಹಾರಿಗಳು ಎಂದೂ, ಮಾಂಸದ ಮೇಲೆ ಇಷ್ಟ ಇರುವವರನ್ನು ಮಾಂಸಾಹಾರಿಗಳೆಂದು ಕರೆಯುವುದು ನಡೆಯುತ್ತಿದೆ. ಶಾಖಾಹಾರಿಗಳಾದರೂ ಮಾಂಸಾಹಾರಿಗಳಾದರೂ ಇಬ್ಬರೂ ಮನುಷ್ಯರೇ ಆದರೂ, ಮಾಂಸದ ಮೇಲೆ ಅವರಿಗಿರುವ ಇಷ್ಟ ಅಯಿಷ್ಟಗಳನ್ನನು ಸರಿಸಿ ಮನುಷ್ಯರನ್ನು ಎರಡು ಜಾತಿಗಳಾಗಿ ಮಾಂಸಾಹಾರಿಗಳು, ಶಾಖಾಹಾರಿ ಗಳೆಂದು ವಿಭಜಿಸಿ ಹೇಳುವುದು ನಡೆಯುತ್ತಿದೆ. ಅದೇ ವಿಧವಾಗಿ ಮನುಷ್ಯನಿಗಿರುವ ಅನೇಕ ವಿಷಯಗಳಲ್ಲಿ ಮನುಷ್ಯರು ಅನೇಕ ಗುಂಪುಗಳಾಗಿ ಅವರ ಇಷ್ಟಾಯಿಷ್ಟಗಳನ್ನನುಸರಿಸಿ ವಿಭಜಿಸಲ್ಪಟ್ಟಿದ್ದಾರೆ. ಕೆಲವರನ್ನು ಸಂಸಾರಿಗಳು ಎಂದರೆ ಕೆಲವರನ್ನು ಸನ್ಯಾಸಿಗಳು ಎನ್ನುತ್ತಿದ್ದೇವೆ. ಕೆಲವರನ್ನು ದುರ್ಮಾರ್ಗರು ಎಂದರೇ ಕೆಲವರನ್ನು ಸನ್ಮಾರ್ಗರು ಎಂದು ಅನ್ನುತ್ತಿದ್ದೇವೆ. ಈ ವಿಧವಾಗಿ ಬೇರೆ ಬೇರೆ ವಿಷಯಗಳಲ್ಲಿ ಅವರಿಗಿರುವ ಸಮ್ಮತಿ ಅಸಮ್ಮತಿಯನ್ನು ಅನುಸರಿಸಿ ಬೇರೆ ಬೇರೆ ಹೆಸರುಗಳು ಇಟ್ಟು ಮನುಷ್ಯರನ್ನು ಕರೆಯುವುದು ನಡೆಯುತ್ತಿದೆ.

ಮನುಷ್ಯ ಶರೀರದ ಒಳಗೆ ತಲೆಯಲ್ಲಿ ಮೂರು ಹೆಸರುಗಳಿರುವ ಗುಣ ಭಾಗಗಳು ಇವೆ. ಅವುಗಳನ್ನು ವರುಸೆಯಾಗಿ ತಾಮಸ ಗುಣಭಾಗ, ರಾಜಸ ಗುಣಭಾಗ, ಸಾತ್ವಿಕ ಗುಣಭಾಗ ಎಂದು ಕರೆಯುತ್ತಿದ್ದೇವೆ. ಹಾಗೇ ಅವುಗಳ ವರಸೆಯಲ್ಲೇ ಗುಣಗಳು ಇಲ್ಲದ ಮತ್ತೊಂದು ಭಾಗ ಸಹ ಇದೆ. ಗುಣಗಳು ಇಲ್ಲದ ನಾಲ್ಕನೆಯ ಭಾಗವನ್ನು ಗುಣಾತೀತ ಭಾಗವೆಂದು ಹೇಳುತ್ತಿದ್ದೇವೆ. ಒಟ್ಟು ನಾಲ್ಕು ಭಾಗಗಳಾಗಿರುವ ಗುಣಾತೀತ ಮತ್ತು ಗುಣಗಳ ಭಾಗಗಳು ಸೂಕ್ಷ್ಮರೂಪ ಇರುವವು. ಆದ್ದರಿಂದ ಯಾರ ಬಾಹ್ಯ ದೃಷ್ಠಿಗೆ ಕಾಣಿಸುವುದಿಲ್ಲ. ಜ್ಞಾನನೇತ್ರಕ್ಕೆ ಗೋಚರಿಸುವ ಅವುಗಳ ನಿರ್ಮಾಣ ಶರೀರದಲ್ಲಿ ಹೇಗೆ ಇದೆಯೋ ನಂತರ ಪುಟದಲ್ಲಿ ತೋರಿಸುತ್ತಿದ್ದೇವೆ ನೋಡಿ.




<u>ಗುಣ ಭಾಗಗಳ ಚಿತ್ರ ಪಟ. ತಾಮಸ ಗುಣ ಭಾಗದಲ್ಲಿ ಜೀವಾತ್ಮ.</u>

ಶರೀರದಲ್ಲಿ ಜೀವಾತ್ಮ ಮಾತ್ರ ವ್ಯಕ್ತಿತ್ವ ಇರುವವನು. ಶರೀರದಲ್ಲಿ ಜೀವಾತ್ಮನಿಗೆ ಹೊರತು ಯಾವ ಇತರ ಭಾಗಕ್ಕೂ ವ್ಯಕ್ತಿತ್ವ ಇಲ್ಲ. ಮನುಷ್ಯ ತಲೆಯಲ್ಲಿ ನಾಲ್ಕು ಭಾಗಗಳ ಚಕ್ರ ಹಣೆಯಲ್ಲಿ ಸರಿಯಾಗಿ ತಲೆ ಮಧ್ಯೆದಲ್ಲಿ ಇದೆ. ಅದನ್ನೇ ಗುಣಚಕ್ರ ಎನ್ನುತ್ತೇವೆ. ಗುಣಚಕ್ರದಲ್ಲಿ ಮೂರು ಗುಣ ಭಾಗಗಳು, ಒಂದು ಗುಣಗಳು ಇಲ್ಲದ ಆತ್ಮ ಭಾಗ ಇದೆಯೆಂದು ಹೇಳಿಕೊಂಡಿದ್ದೇವೆ. ಜೀವಾತ್ಮನಿಗೆ ಅಂಟಿಕೊಂಡಿರುವ ಬುದ್ಧಿ, ಜೀವಾತ್ಮ ಇಷ್ಟವನ್ನನುಸರಿಸಿ ಜೀವಾತ್ಮನನ್ನು ಪ್ರೇರೇಪಿಸುತ್ತಿರುತ್ತದೆ. ಜೀವಾತ್ಮನಿಗೆ ಮೂರು ಗುಣಗಳಲ್ಲಾಗಲೀ, ಗುಣಗಳು ಇಲ್ಲದ ಭಾಗದಲ್ಲಾಗಲೀ ಎಲ್ಲಿ ಇಷ್ಟವಿದ್ದರೇ ಅಲ್ಲಿಗೆ ಜೀವಾತ್ಮ ಸೇರಿಹೋಗುತ್ತದೆ. ಜೀವಾತ್ಮನಿಗೆ ಇಷ್ಟವಾಗಿರುವುದು ಯಾವುದಿದ್ದರೇ ಆ ಭಾಗದೊಳಕ್ಕೆ ಜೀವಾತ್ಮ ಸೇರಿಹೋಗುತ್ತದೆ. ಆಗ ಜೀವಾತ್ಮ ಯಾವ ಗುಣಭಾಗದಲ್ಲಿ ಇರುತ್ತಾನೋ, ಆ ಗುಣ ಭಾಗವೊಂದರ ಹೆಸರಿಂದ ಆತನು ಚಲಾವಣೆ ಆಗುತ್ತಾನೆ. ತಾಮಸ ಗುಣಭಾಗದಲ್ಲಿರುವ ಜೀವಾತ್ಮನನ್ನು ತಾಮಸನು ಎಂದೂ, ರಾಜಸ ಭಾಗದಲ್ಲಿರುವ ಜೀವಾತ್ಮನನ್ನು ರಾಜಸನು ಎಂದೂ, ಸಾತ್ತ್ವಿಕ ಭಾಗದಲ್ಲಿರುವ ಜೀವಾತ್ಮನನ್ನು ಸಾತ್ತ್ವಿಕನೆಂದೂ, ಗುಣಗಳು ಇಲ್ಲದ ಆತ್ಮ

ಭಾಗದಲ್ಲಿರುವ ಜೀವಾತ್ಮನನ್ನು ಯೋಗಿ ಎಂದೂ ಹೇಳುವುದು ನಡೆಯುತ್ತಿದೆ. ಇದೆಲ್ಲವೂ ಶರೀರದ ಒಳಗಿನ ವಿಧಾನ. ಶರೀರದ ಒಳಗಿನ ವಿಧಾನವಿರುವಹಾಗೇ ಶರೀರದ ಹೊರಗೂ ಸಹ ಜೀವಾತ್ಮನು ವ್ಯಕ್ತಿತ್ವ ಹೊಂದಿ ತನಗಿಷ್ಟವಾದವುಗಳನ್ನೇ ಅನುಸರಿಸುತ್ತಾ, ಆತನು ಅನುಸರಿಸುವ ವಿಧಾನಗಳನ್ನನುಸರಿಸಿ ಹೆಸರುಗಳು ತಂದುಕೊಳ್ಳುತ್ತಿದ್ದಾನೆ.

ಉದಾಹರಣೆಗೆ ದೇಶದಲ್ಲಿ ಕೆಲವು ರಾಜಕೀಯ ಪಾರ್ಟೀಗಳು ಇರುವುದು ಎಲ್ಲರಿಗೂ ತಿಳಿದ ವಿಷಯವೇ. ಆದರೇ ನಮಗೆ ಅರ್ಥವಾಗುವುದಕ್ಕೆ ಅವುಗಳಲ್ಲಿ ಮುಖ್ಯವಾದ ನಾಲ್ಕು ರಾಜಕೀಯ ಪಾರ್ಟೀಗಳ ಹೆಸರುಗಳನ್ನು ಹೇಳಿಕೊಳ್ಳೋಣ. ಒಂದು ತೆಲುಗುದೇಶ, ಎರಡು ಕಾಂಗ್ರೆಸ್, ಮೂರು ಕಮ್ಯೂನಿಷ್ಟು, ನಾಲ್ಕು ಬಿ,ಜೆ,ಪಿ ಎನ್ನುವ ನಾಲ್ಕು ಪಾರ್ಟೀಗಳನ್ನು ತೆಗೆದುಕೊಂಡು ನೋಡಿದರೆ, ನಾಲ್ಕು ಪಾರ್ಟೀಗಳ ವಿಧಿ ವಿಧಾನಗಳು, ಸಿದ್ಧಾಂತಗಳು, ಕಾರ್ಯಾಚರಣೆಗಳು ಬೇರೆಬೇರೆಯಾಗಿ ಇವೆ. ನಾಲ್ಕು ಬೇರೆಬೇರೆ ವಿಧಾನ ಗಳಿರುವ ಪಾರ್ಟೀಗಳಲ್ಲಿ ಒಬ್ಬನಿಗೆ ಒಂದು ಪಾರ್ಟೀ ವಿಧಾನಗಳೆಲ್ಲವೂ ಇಷ್ಟವಾದಾಗ ಆತನು ತನಗೆ ಇಷ್ಟವಾದ ಪಾರ್ಟೀಯನ್ನು ಕುರಿತು ಹೊಗಳುತ್ತಿರುವನು, ಉಳಿದ ಪಾರ್ಟೀಗಳನ್ನು ಅವುಗಳಲ್ಲಿನ ವಿಧಾನಗಳು ಇಷ್ಟವಾಗದಿರುದುವುದರಿಂದ ಆ ಪಾರ್ಟೀಗಳಿಗೆ ದೂರವಾಗಿ ಇರುತ್ತಾನೆ. ಒಬ್ಬ ಮನುಷ್ಯನಿಗೆ ಯಾವ ರಾಜಕೀಯ ಪಾರ್ಟೀ ಇಷ್ಟವಾದರೇ ಆತನಿಗೆ ಆ ಪಾರ್ಟೀ ಹೆಸರು ಬರುವುದು, ಆತನನ್ನು ಆ ಪಾರ್ಟೀ ಮನುಷ್ಯನಾಗಿ ಕರೆಯುವುದು ನಡೆಯುತ್ತಿದೆ. ಉದಾಹರಣೆಗೆ ಕಾಂಗ್ರೆಸ್ ಪಾರ್ಟೀಯನ್ನು ಇಷ್ಟಪಟ್ಟವನನ್ನು ಕಾಂಗ್ರೆಸ್‌ದವನೆಂದು ಎನ್ನುವುದು ನಡೆಯುತ್ತಿದೆ.

ಯಾವ ವಿಧವಾಗಿ ಶರೀರದ ಒಳಗೆ ಒಂದು ಗುಣಕ್ಕೆ ಸಂಬಂಧಿ ಸಿದವನನ್ನು ಆ ಗುಣವೊಂದರ ಹೆಸರಿಂದಲೆ ಕರೆದ ಹಾಗೆ, ಹೊರಗಿನ ಪ್ರಪಂಚದಲ್ಲಿ ಸಹ ಒಂದು ರಾಜಕೀಯಪಾರ್ಟೀಗೆ ಸಂಬಂಧಿಸಿದವನನ್ನು ಆ ಪಾರ್ಟೀ ವ್ಯಕ್ತಿಯಾಗಿ, ಆ ಪಾರ್ಟೀಹೆಸರಿಂದಲೇ ಕರೆಯುವುದು ನಡೆಯುತ್ತಿದೆ.

ಯಾವ ವಿಧವಾಗಿ ಶರೀರದ ಒಳಗೆ ಗುಣಗಳ ಗುಂಪುಗಳು, ಶರೀರದ ಹೊರಗೆ ರಾಜಕೀಯ ಪಾರ್ಟೀಗಳು ಇವೆಯೋ, ಅದೇ ವಿಧವಾಗಿ ಪ್ರಪಂಚದಲ್ಲಿ ದೇವರಿಗೆ ಸಂಬಂಧಿಸಿದ ವಿಶ್ವಾಸ ಇಲ್ಲವೆ ಭಕ್ತಿ ಮಾರ್ಗದಲ್ಲಿ ಮತಗಳು ಎನ್ನುವ ಹೆಸರಿಂದ ಕೆಲವು ಸಮಾಜಗಳು ಇವೆ. ಒಟ್ಟಾರೆ ಮತಗಳು ಎಷ್ಟು ಇದ್ದರೂ ಅವುಗಳಲ್ಲಿ ಮುಖ್ಯವಾಗಿ ಮೂರು ಮತಗಳು ಇವೆ. ಅದರಲ್ಲಿ ಮೊದಲನೆಯದು ಇಂದೂ (ಹಿಂದೂ) ಮತ. ಎರಡನೆಯದು ಕ್ರೈಸ್ತ ಮತ, ಮೂರನೆಯದು ಇಸ್ಲಾಮ್ ಮತ. ಈ ಮೂರು ಮತಗಳಲ್ಲಿ ಹೆಚ್ಚಿನ ಜನಸಂಖ್ಯೆ ಇರುವುದು ಕ್ರೈಸ್ತ ಆದಾಗ, ನಂತರದು ಇಸ್ಲಾಮ್, ನಂತರ ಕಡಿಮೆ ಮನುಷ್ಯರಿಗಿರುವ ಕೊನೆಯದು ಇಂದೂಮತ. ಪ್ರಸ್ತುತ ಕಾಲದಲ್ಲಿ ಇಂದೂ ಮತ ಚಿಕ್ಕದಾದರೂ ಪೂರ್ವದಲ್ಲಿ ಯಾವ ಮತವೂ ಇಲ್ಲದಿರುವಾಗ ಬಹಳ ದೊಡ್ಡ ಮತವಾಗಿ ಇಂದೂ ಮತ ಇರುತ್ತಿತ್ತು. ಇತರ ಮತಗಳು ಇಲ್ಲದಿರುವಾಗ, ಇಂದೂ ಮತ ಎನ್ನುವ ಹೆಸರು ಅಲ್ಲದೆ 'ಇಂದೂ ಸಮಾಜ' ಎನ್ನುವ ಹೆಸರಿಂದ ಕರೆಯಲಾಗುತ್ತಿತ್ತು. ನಂತರ ಇತರ ಮತಗಳು ಬಂದಾಗ, ಅವುಗಳ ಮಧ್ಯದಲ್ಲಿ ಗುರುತಿಸುವುದಕ್ಕೆ ಇಂದೂ ಸಮಾಜವನ್ನು ಸಹ ಇಂದೂ ಮತವೆಂದು ಕರೆಯಬೇಕಾಗಿ ಬಂದಿತು. ಇಂದೂ, ಕ್ರೈಸ್ತ, ಇಸ್ಲಾಮ್ ಸಮಾಜಗಳಲ್ಲಿ ಯಾವ ಮತ ಇಷ್ಟವಾದವರು ಆ ಮತದಲ್ಲಿ ಇರುವುದು ನಡೆದಿದೆ.

ಪ್ರಸ್ತುತಕ್ಕೆ ನಾನು ಸಹ ಇಂದೂ ಸಮಾಜದಲ್ಲಿನವನೇ, ಆದರೂ ಅವಶ್ಯವನ್ನನುಸರಿಸಿ ಇಂದೂಮತಸ್ಥನೆಂದು ಹೇಳಿಕೊಳ್ಳಬೇಕಾಗಿ ಬರುತ್ತದೆ. ನಾನು ಇಂದೂಮತಸ್ಥನೆಂದು ಹೇಳಿದರೆ, ಇಲ್ಲಿಯವರೆಗು ನಾನು ಹೇಳಿದಹಾಗೆ ಇಂದೂ ಮತದ ಮೇಲೆ ನನಗೆ ಬಹಳ ಇಷ್ಟವೆಂದು, ಹಾಗೇ ಇತರ ಮತಗಳ ಮೇಲೆ ಇಷ್ಟ ಇಲ್ಲವೆಂದು ನೀವು ಅಂದುಕೊಳ್ಳಬಹುದು. ಅವನವನ ಇಷ್ಟವನ್ನನುಸರಿಸಿ ಮತವಿರುತ್ತದೆ ಎಂದು ನಾನು ಹೇಳಿದಹಾಗೆ, ಈಗ ನಾನು ಸಹ ಆ ಮಾತಿನ ಪ್ರಕಾರ ಪರಿಗಣನೆಯೊಳಗೆ ಬಂದರೂ, ವಾಸ್ತವಕ್ಕೆ ನನಗೆ ಇಂದೂ ಮತ ಎಂದರೆ ಇಷ್ಟ, ಇತರ ಮತಗಳು ಎಂದರೆ ಅಯಿಷ್ಟ ಎನ್ನುವುದು

ಯಾವ ಮಾತ್ರ ನನ್ನಲ್ಲಿ ಇಲ್ಲ. ಒಂದು ಮತದಲ್ಲಿ ಇರುವವನಿಗೆ ಅವನ ಮತದ ಮೇಲೆ ಪ್ರೇಮ, ಇತರರ ಮತದ ಮೇಲೆ ಅಸೂಯೆ ಇರುತ್ತದೆಂದು ಖಚಿತವಾಗಿ ಹೇಳಲಾರೆವು. ಈ ವಿಷಯವನ್ನು ಸಮಗ್ರವಾಗಿ ಪರಿಶೀಲಿಸಿ ನೋಡಿದರೆ ಈ ವಿಧವಾಗಿ ಇದೆ. ಒಬ್ಬ ವ್ಯಕ್ತಿ ಹುಟ್ಟಿದಾಗ ಮತವೊಂದರ ವಿಷಯ ಆತನಿಗೆ ತಿಳಿದಿಲ್ಲ. ತನ್ನ ತಾಯಿ ತಂದೆಯರು ಯಾವುದೋ ಒಂದು ಮತಕ್ಕೆ ಸೇರಿದವರಾಗಿದ್ದರೂ ಹುಟ್ಟಿದ ಶಿಶುವಿಗೆ ಮತ ತಿಳಿದಿಲ್ಲ. ಶಿಶುವಾಗಿರುವವನು ಬೆಳೆದು ದೊಡ್ಡವನಾದ ನಂತರ ಪ್ರಪಂಚ ವಿಷಯಗಳನ್ನು ಗ್ರಹಿಸುವ ಸಾಮರ್ಥ್ಯ ಬರುವವರೆಗು ತಾನು ಯಾವ ಮತವೊಂದರ ಕುಟುಂಬದಲ್ಲಿ ಹುಟ್ಟಿದ್ದೇನೋ ತನಗೇ ತಿಳಿದಿಲ್ಲ. ಹುಟ್ಟಿದ ಕೆಲವು ಸಂವತ್ಸರಗಳ ನಂತರ ತಾನು ಹುಟ್ಟಿರುವುದು ಇಂತಹ ಮತ ಎಂದು ತಿಳಿದರೂ ಕೆಲವರು ಮತವನ್ನು ಕುರಿತು ಹೆಚ್ಚಾಗಿ ತಲೆಕೆಡಿಸಿಕೊಳ್ಳುವುದಿಲ್ಲ, ಕೆಲವರು ಮಾತ್ರ ಮತದ ಮೇಲೆ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಾರೆ. ಇದೆಲ್ಲವೂ ತಮ್ಮ ಹಿರಿಯರ ಪ್ರೋದ್ಬಲದಿಂದಿರುತ್ತದೆ. ಕೆಲವರು ತಮಗೆ ಊಹೆ ಬಂದಾಗಿನಿಂದ ಬದುಕುವ ದಾರಿಯಲ್ಲಿ ಬಿದ್ದುಹೋಗಿ ಜೀವನ ವಿಧಾನದ ಕಡೆ ತಮ್ಮ ಬುದ್ಧಿಯನ್ನು ಉಪಯೋಗಿಸುತ್ತಿರುತ್ತಾರೆ. ಕೆಲವರು ಎಲ್ಲ ಸೌಕರ್ಯಗಳಿಂದ ಬದುಕುತ್ತಿರುವುದರಿಂದ, ಅವರಿಗೆ ಬದುಕುವದರಲ್ಲಿ ಕೆಲಸ ಇಲ್ಲದಿರುವುದರಿಂದ, ಮತವನ್ನು ಅಭಿವೃದ್ಧಿ ಮಾಡಬೇಕೆನ್ನುವ ಚಿಂತೆಯಲ್ಲಿ ಬಿದ್ದು ಬೇರೆ ಆಲೋಚನೆ ಇಲ್ಲದಂತೆ ಇರುತ್ತಾರೆ. ಅಂತಹವರು ಬದುಕುವುದರಲ್ಲಿ ಕಷ್ಟಪಡುವವರಿಗೆ, ಸರಿಯಾಗಿ ಬದುಕದವರಿಗೆ ಹಣದ ಆಸೆ ತೋರಿಸಿ ಹತ್ತಿರಕ್ಕೆ ಸೇರಿಸಿಕೊಂಡು, ಅವರನ್ನು ಮತಕ್ಕೋಸ್ಕರ ಕೆಲಸ ಮಾಡುವಂತೆ ಬಳಸಿಕೊಳ್ಳುತ್ತಿರುವರು. ಈ ವಿಧವಾಗಿ ಬದಕಲಾರದ ಕೆಲವರಿಗೆ ಮತವೇ ಜೀವನ ವಿಧಾನವಾದಾಗ, ಎಲ್ಲಾ ಇದ್ದರೂ ಕೆಲವರಿಗೆ ಮತವೇ ಜೀವನ ಧ್ಯೇಯವಾಗಿದೆ.

ಕೆಲವರು ಯಾವ ಮತದಲ್ಲಿ ಹುಟ್ಟಿದ್ದರೂ, ಅವರ ಮತದ ಮೇಲೆ ಹೆಚ್ಚಿನ ಆಸಕ್ತಿ ಇಲ್ಲದವರಾಗಿ, ದೇವರ ಮೇಲೆ ಪೂರ್ತಿ ಆಸಕ್ತಿ ಹೊಂದಿರುತ್ತಾರೆ.

ಅಂತಹವರಿಗೆ ಮತದಿಂದ ದೇವರು ತಿಳಿಯುವುದೆನ್ನುವ ನಂಬಿಕೆ ಇರುವುದಿಲ್ಲ. ಎಷ್ಟೋ ಜ್ಞಾನಿಗಳ ಹಾಗೆ ಚಲಾವಣೆ ಆಗುವವರು ಮತದಿಂದಲೇ ದೇವರು ತಿಳಿಯುವನೆಂದು, ಮತ ವಿಧಾನಗಳಿಂದಲೇ ದೇವರಿಗೆ ಹತ್ತಿರದವರಾಗುತ್ತೇವೆಂದು ಬೋಧಿಸುತ್ತಿದ್ದರೂ, ಅವರ ಮಾತುಗಳು ಅಸತ್ಯವೆಂದು ತೆಗೆದುಹಾಕುತ್ತಾ, ಮತದ ಕಡೆ ಆಸಕ್ತಿ ತೋರಿಸದವರು ತನ್ನ ಮತವನ್ನು ಹೇಗೆ ನೋಡುತ್ತಿರುತ್ತಾರೋ, ಇತರ ಮತಗಳನ್ನು ಸಹ ಅದೇ ವಿಧವಾಗಿ ನೋಡುತ್ತಿರುವವರು. ಇಂಥವರು ಕೆಲವರಿರುವಾಗ ಮತ್ತೆ ಕೆಲವರು ಮತ ಗುರುಗಳು ಹೇಳಿರುವುದನ್ನು ಕೇಳಿ, ತಮಗೆ ಯಾವ ಮತದಲ್ಲಿನ ದೇವರು ಮೇಲು ಮಾಡಿದರೆ ಆ ಮತದೊಳಗೆ ಸೇರಿಹೋಗಿ, ಆ ದೇವರನ್ನು ಆರಾಧಿಸುವುದಕ್ಕೆ ಸಿದ್ಧವಾಗಿ ಇರುತ್ತಾರೆ. ಅಂಥವರು ತಾವಿರುವ ಮತದಲ್ಲಿ ಆರ್ಥಿಕ ಸಮಸ್ಯೆಗಳು, ವ್ಯಾಧಿಗಳ ಬಾಧೆಗಳು ಹೆಚ್ಚಾದಾಗ ಪರ ಮತದವರು ನಮ್ಮ ಮತದೊಳಗೆ ಬಂದರೆ ನಿಮಗೆ ವ್ಯಾಧಿಗಳು ಹೋಗುವಹಾಗೆ ಮಾಡುತ್ತೇವೆ. ಆರ್ಥಿಕ ಸಮಸ್ಯೆಗಳು ಹೋಗುವಹಾಗೆ ದೇವರ ಹತ್ತಿರ ಹೇಳುತ್ತೇವೆ ಎಂದು ಹೇಳುವುದೇ ಅಲ್ಲದೆ, ಯಾವುದೋ ಒಂದು ವಿಧವಾಗಿ ಸ್ವಲ್ಪ ಲಾಭವನ್ನು ಕೈಗೂಡಿಸಿ ಪ್ರಲೋಭವಿಟ್ಟಾಗ, ಆ ಪ್ರಲೋಭಗಳ ಆಸೆಗೆ ಒಳಗಾಗಿ ಇರುವ ಮತವನ್ನು ಬಿಟ್ಟು ಇತರ ಮತದೊಳಗೆ ಹೋಗುತ್ತಿರುತ್ತಾರೆ. ಅಂಥವರು ಸೇರಿದ ಆ ಮತದಲ್ಲಿ ಶಾಶ್ವತವಾಗಿ ಇರದೆ, ಇನ್ನೂ ಎಲ್ಲಾದರೂ ಲಾಭ ಬಂದರೆ ಇನ್ನೊಂದು ಮತದೊಳಗೆ ಸೇರುವುದಕ್ಕೆ ಹಿಂಜರಿಯುವುದಿಲ್ಲ. ಅಂಥವರನ್ನು ಯಾರಾದರೂ ಮತವನ್ನು ಏಕೆ ಬದಲಾಯಿಸಿದ್ದೀಯ ಎಂದು ಕೇಳಿದರೆ, ಆ ಮತದಲ್ಲಿನ ದೇವರಿಗಿಂತ ಈ ಮತದಲ್ಲಿನ ದೇವರೇ ನನ್ನನ್ನು ಚೆನ್ನಾಗಿ ನೋಡುತ್ತಿದ್ದಾನೆ, ಆ ದೇವರಗಿಂತಲೂ ಈ ದೇವರೇ ಮೇಲೆಂದು ನಿರ್ಭಯದಿಂದ ಹೇಳುತ್ತಿರುತ್ತಾರೆ.

ಅಂಥವರ ದೃಷ್ಠಿಯಲ್ಲಿ ಮತಕ್ಕೆ ಒಬ್ಬ ದೇವರಿದ್ದಾನೆಂದು, ಆ ದೇವರೇ ಆ ಮತವನ್ನು ಸೃಷ್ಠಿಸಿದ್ದಾನೆಂದು, ತಾನು ಸೃಷ್ಠಿಸಿದ ಮತದಲ್ಲಿ ಸೇರಿದವರೆಲ್ಲರನ್ನೂ, ಆ ಮತವನ್ನು ಸೃಷ್ಠಿಸಿದ ದೇವರು ಇವರೆಲ್ಲಾ ನನ್ನವರೆನ್ನುವ ಉದ್ದೇಶದಿಂದ

ಆ ಮತದವರೆಲ್ಲರನ್ನೂ ಚೆನ್ನಾಗಿ ನೋಡಿಕೊಳ್ಳುವನೆಂದೂ ಹೇಳುತ್ತಿರುವರು. ಅಂತಹವರೆಲ್ಲರೂ ಮತಗಳ ಪ್ರಚಾರಕರು ಲಾಭವನ್ನು ಹೊಂದಿಸುತ್ತೇವೆಂದು ಪ್ರಲೋಭವಿಟ್ಟರೇ, ಆ ಪ್ರಲೋಭಗಳಿಗೆ ಒಳಗಾಗಿ ಮತವನ್ನು ಬದಲಾಯಿಸುತ್ತಿರುತ್ತಾರೆ. ನಮ್ಮ ಮತದಲ್ಲಿ ಸೇರಿದರೇ ಉದ್ಯೋಗ ಕೊಡುತ್ತೇವೆಂದರೆ ಅದಕ್ಕೆ ಆಸೆಪಟ್ಟು ಇರುವ ಮತವನ್ನು ಬಿಟ್ಟು ಸುಲಭವಾಗಿ ಇತರ ಮತದೊಳಗೆ ಸೇರಿಹೋಗುತ್ತಿರುತ್ತಾರೆ. ಮತ ಬದಲಾದ ನಂತರ ಉದ್ಯೋಗವನ್ನುಪಡೆದು ಚೆನ್ನಾಗಿಯೇ ಬದುಕುತ್ತಿದ್ದರೂ, ಇನ್ನೊಂದು ಮತದವರು ಮನೆ ಜಾಗವನ್ನು ಉಚಿತವಾಗಿ ಕೊಡುತ್ತೇವೆಂದರೆ ಬರುವ ಲಾಭವನ್ನು ಏಕೆ ಬಿಟ್ಟುಕೊಳ್ಳಬೇಕೆಂದು, ಪ್ರಸ್ತುತವಿರುವ ಮತ ಬದಲಾದ ಮತವೇ ಆದರೂ, ಮನೆಜಾಗಕ್ಕಾಗಿ ಎರಡನೆ ಮತವನ್ನು ಬಿಟ್ಟು ಮೂರನೆ ಮತದೊಳಗೆ ಸೇರಿಹೋಗುತ್ತಿದ್ದಾನೆ. ಮೂರನೆ ಮತದಲ್ಲಿ ಸೇರಿ ಮನೆ ಜಾಗವನ್ನು ಸಂಪಾದಿಸಿದ ನಂತರ ಸ್ವಲ್ಪ ಕಾಲಕ್ಕೆ ಮೊದಲನೆ ಮತದವರು ಬಂದು ಎಲ್ಲರೂ ಮತವನ್ನು ಬಿಟ್ಟುಹೋಗುತ್ತಿದ್ದಾರೆ. ಆದ್ದರಿಂದ ನಮ್ಮ ಮತ ಕ್ಷೀಣಿಸಿ ಹೋಗುತ್ತಿದೆ. ಸ್ವಲ್ಪ ಕಾಲಕ್ಕೆ ಮತ ಪೂರ್ತಿಯಾಗಿ ಇಲ್ಲದಂತೆ ಹೋಗುವ ಅಪಾಯವಿದೆ. ಆದ್ದರಿಂದ ಮತವನ್ನು ಬಿಟ್ಟುಹೋದವರೆಲ್ಲರನ್ನೂ ಪುನಃ ಮತದೊಳಗೆ ಸೇರಿಸಿಕೊಳ್ಳಬೇಕೆಂದುಕೊಂಡಿದ್ದೇವೆ. ಹಾಗೆ ಪುನಃ ಮತದೊಳಗೆ ಸೇರುವವರೆಲ್ಲರಿಗೂ ಮತ ಸಂಪ್ರದಾಯಗಳ ಪ್ರಕಾರ ಜೊತೆ ಪಂಚೆಗಳು, ಜೊತೆ ಸೀರೆಗಳು ಕೊಟ್ಟು ಮತದೊಳಗೆ ಸೇರಿಸಿಕೊಳ್ಳಬೇಕೆಂದು ಕೊಂಡಿದ್ದೇವೆ ಎಂದು ಹೇಳಿದರೆ, ಅವರು ಕೊಡುವ ಸೀರೆಗಳು, ಪಂಚೆಗಳಿಗೋಸ್ಕರ ಪುನಃ ಮತದೊಳಗೆ ಸೇರುವವರಿದ್ದಾರೆ.

ಈ ವಿಧವಾಗಿ ಯಾವುದೋ ಬರುತ್ತದೆಂದು ಅದಕ್ಕೋಸ್ಕರ ಪ್ರಲೋಭಪಟ್ಟು ಮತವನ್ನು ಅನೇಕಬಾರಿ ಬದಲಾಯಿಸುವವರಿದ್ದಾರೆ. ಅಂತಹವರಿಗೆ ಒಂದು ಮತ ಎನ್ನುವ ನಿಯಮ ಯಾವುದೂ ಇರುವುದಿಲ್ಲ. ಎಲ್ಲಿ ಲಾಭ ಬಂದರೆ ಅಲ್ಲಿಗೆ ಹೋಗಿ ಆ ಮತದಲ್ಲಿ ಸೇರಿಹೋಗುತ್ತಿರುವರು. ಈ ವಿಧವಾಗಿ ಮತ ಎನ್ನುವುದರಿಂದ ಲಾಭವನ್ನು ಹೊಂದಬೇ ಕೆಂದುಕೊಳ್ಳುವ

ವರು ಕೆಲವರಿರುವಾಗ, ಮತ ಎನ್ನುವುದರಿಂದ ದೇವರನ್ನು ತಿಳಿಯ ಬಹುದೆನ್ನುವವರು ಕೆಲವರಿದ್ದಾರೆ. ಹಾಗೇ ಮತವನ್ನು ಪ್ರಚಾರ ಮಾಡಿ, ಮತವನ್ನು ಎಷ್ಟು ಬೆಳಿಸಿದರೆ ಅಷ್ಟು ದೇವರ ಸೇವೆ ಮಾಡಿದಂತಾಗುತ್ತದೆಂದು ಅಂದು ಕೊಳ್ಳುವವರು ಸಹ ಕೆಲವರು ಇದ್ದಾರೆ. ಮತ್ತೆ ಕೆಲವರು ತಮ್ಮ ಮತವನ್ನು ಕಾಪಾಡಿಕೊಳ್ಳುವುದಕ್ಕೆ ಇತರ ಮತಗಳ ಮೇಲೆ ದ್ವೇಷವನ್ನು ಬೆಳೆಸಿಕೊಂಡು, ಇತರ ಮತಗಳಿಗೆ, ಇತರ ಮತಸ್ಥರಿಗೆ ಹಾನಿ ಮಾಡುವುದೇ ಕೆಲಸವಾಗಿ ಇಟ್ಟುಕೊಂಡಿದ್ದಾರೆ. ಹಾಗೆ ಮಾಡುವುದರಿಂದ ದೇವರಿಗೆ ಪ್ರೀತಿಪಾತ್ರರಾ ಗುತ್ತಾರೆಂದು ಕೆಲವರು ಹೇಳುತ್ತಿರುವರು. ಇನ್ನೂ ಕೆಲವರು ಮನುಷ್ಯರು ತಮ್ಮ ಮತದಲ್ಲಿರುವ ದೇವರೇ ನಿಜವಾದ ದೇವರೆಂದೂ, ಇತರ ಮತದಲ್ಲಿರುವ ದೇವರು ದೇವರೇ ಅಲ್ಲವೆಂದು, ಮಾಯೆ ಎಂದು, ಆ ಮಾಯೆ ಮತದಲ್ಲಿರುವವ ರನ್ನು ಇಲ್ಲದಂತೆ ಮಾಡುವುದೇ ದೇವರಿಗೋಸ್ಕರ ಹೋರಾಡುವುದೆಂದು ತಿಳಿದು, ನಾವು ದೇವರ ಸೈನಿಕರೆಂದು, ನಮ್ಮದು ಅಜ್ಞಾನಿಗಳ ಮೇಲೆ ಪವಿತ್ರ ಯುದ್ಧವೆಂದು, ಇತರ ಮತಗಳವರನ್ನು ಸಾಯಿಸುವುದೇ ತಮ್ಮ ಕೆಲಸವೆಂದು, ತಮಗೆ ಶತ್ರು ಅಲ್ಲದಿದ್ದರೂ ಇತರ ಮತಗಳ ಪ್ರಜೆಗಳು ದೇವರಿಗೆ ಶತ್ರುಗಳೆಂದೂ, ಅಂಥವರನ್ನು ಸಾಯಿಸುವುದೇ ನಮ್ಮ ಕರ್ತವ್ಯವೆಂದು ಹೇಳುತ್ತಾ ಅಮಾಯಕ ಜನರನ್ನು ಬಾಂಬುಗಳಿಂದ, ಬಂದೂಕುಗಳಿಂದ ಸಾಯಿಸುತ್ತಿರುವರು. ಅಂಥವರಿಗೆ ಮತ ಎನ್ನುವುದು ಹೊರತು ಮತವೆಂದರೆ ಏನೊ? ಅದನ್ನು ಯಾರು ತಯಾರು ಮಾಡಿದ್ದಾರೊ? ಮತದಿಂದ ದೇವರು ತಿಳಿಯುತ್ತಾನಾ? ಮತ ಯಾರನ್ನು ಉದ್ಧರಿಸಿದೆ? ಎಂದು ಸ್ವಲ್ಪವಾದರೂ ಆಲೋಚಿಸುವುದಿಲ್ಲ. ಈ ವಿಧವಾಗಿ ಈ ದಿನ ಭೂಮಿ ಮೇಲೆ ಮತ ಮನುಷ್ಯರಲ್ಲಿ ಬೆಂಕಿ ಇಡುತ್ತಾ ಯಾರಿಗೂ ಅರ್ಥವಾದದ್ದಾಗಿ, ಎಲ್ಲರನ್ನೂ ತನ್ನ ಮಾಯೆಯಲ್ಲಿ ಮುಳುಗುಸುತ್ತಿದೆ. ಮತ ಎನ್ನುವ ಮಾಯೆಯಲ್ಲಿ ಬಿದ್ದವರು, ತಾವು ಮಾಡುತ್ತಿರು ವುದು ಒಳ್ಳೆಯದಾ ಕೆಟ್ಟದಾ ಎಂದು ಆಲೋಚಿಸದೆ ವಿಚಕ್ಷಣೆ ಕಳೆದುಕೊಂಡಿರು ತ್ತಾರೆ. ಅಂಥವರ ದೃಷ್ಟಿಯಲ್ಲಿ ಮತ ಹೊರತು ಪಾಪಪುಣ್ಯಗಳು ಯಾವುವೂ ಇರುವುದಿಲ್ಲ.

ಮನುಷ್ಯರ ಮಧ್ಯದಲ್ಲಿ ಬದುಕುತ್ತಿರುವವರಲ್ಲಿ ಮತ ಎನ್ನುವ ಧ್ಯಾಸ ಇದ್ದರೂ, ಅಡವಿ ಮಧ್ಯದಲ್ಲಿ ಬದುಕುವ ಮನುಷ್ಯರಲ್ಲಿ ನಾವು ಇಂತಹ ಮತದವರು ಎನ್ನುವ ಧ್ಯಾಸ ಇಲ್ಲದೆ ಬದುಕುತ್ತಿದ್ದಾರೆ. ಅಡವಿಯಲ್ಲಿ ನಿವಾಸಿಸುವ ಮನುಷ್ಯರ ಮಧ್ಯದಲ್ಲಿ ಮತಘರ್ಷಣೆಗಳಾಗಲೀ, ಮತದ್ವೇಷಗಳಾಗಲೀ ಇರುವುದಿಲ್ಲ. ಅವರು ಇಂತಹ ಮತದವರೆಂದು ಕರೆಯಲಾಗದೆ ಎಲ್ಲರನ್ನೂ ಸೇರಿಸಿ ಗಿರಿಜನರು ಎನ್ನುತ್ತಿದ್ದೇವೆ. ಗಿರಿ ಎಂದರೆ ಗುಡ್ಡ ಎಂದೂ, ಗಿರಿಜನರು ಎಂದರೆ ಗುಡ್ಡದ ಪ್ರಾಂತಗಳಲ್ಲಿ ನಿವಾಸಿಸುವ ಮನುಷ್ಯರೆಂದು ಅರ್ಥ. ಗಿರಿಜನರು ಎನ್ನುವುದು ಮತದ ಹೆಸರು ಅಲ್ಲವೆಂದು ಎಲ್ಲರೂ ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಕಳೆದುಹೋದ ಯಾವ ಯುಗದಲ್ಲೂ ಮತಗಳು ಇಲ್ಲ. ಕಲಿಯುಗ ಬಂದ ನಂತರ ಭಾರತದೇಶದಲ್ಲಿ ಮತಗಳ ಪ್ರಸ್ತಾಪ ಬಂದಿದೆ. ಎಲ್ಲ ಯುಗಗಳಲ್ಲಿಯೂ ಇಂದೂ ಸಮಾಜವೇ ಇರುತ್ತಿತ್ತು. ಕಲಿಯುಗ ಬಂದ ನಂತರ ಇತರ ಮತಗಳ ಹುಟ್ಟುವಿಕೆ ಬರುವುದರಿಂದ, ಇಂದೂ ಸಮಾಜ ಇಂದೂಮತವಾಗಿ ಬದಲಾಗಿಹೋಗಿದೆ. ಪ್ರಸ್ತುತ ಕಾಲದಲ್ಲಿ ಎಷ್ಟೋ ಮತಗಳಿರುವಾಗ, ಅವುಗಳಲ್ಲಿ ದೊಡ್ಡವು, ಮುಖ್ಯವಾದವು ಮೂರು ಮಾತ್ರವೇ ಇವೆ. ಅವುಗಳನ್ನೇ ಇಂದೂ, ಕ್ರೈಸ್ತ, ಇಸ್ಲಾಮ್ ಮತಗಳೆನ್ನುತ್ತಿದ್ದೇವೆ.

ಈ ಮೂರು ಮತಗಳಿಗೆ ದಿಶ, ದಶಗಳನ್ನು ತೋರಿಸುವವು ಮೂರು, ಗ್ರಂಥಗಳು ಇವೆ. ಇಂದೂಗಳಿಗೆ ಭಗವದ್ಗೀತೆ, ಕ್ರೈಸ್ತರಿಗೆ ಬೈಬಲ್, ಇಸ್ಲಾಮ್ (ಮುಸ್ಲೀಮ್)ರಿಗೆ ಖುರಾನ್ ಗ್ರಂಥಗಳು ಇವೆ. ವಾಸ್ತವವಾಗಿ ಈ ಮೂರು ಗ್ರಂಥಗಳಲ್ಲಿ ಎಲ್ಲೇ ಆಗಲಿ, ಮತಗಳ ಪ್ರಸ್ತಾಪವೇ ಇಲ್ಲ. ಆದರೂ ಮನುಷ್ಯರೇ ಮತಗಳನ್ನು ಸೃಷ್ಠಿಸಿಕೊಂಡಿದ್ದಾರೆ. ಮನುಷ್ಯರಿಗೆ ದೈವ ಜ್ಞಾನವನ್ನು ಬೋಧಿಸುವ ಮೂರು ಗ್ರಂಥಗಳನ್ನು ಕೆಲವರು ಮನುಷ್ಯರು ತಮಗೆ ಇಷ್ಟ ಬಂದಹಾಗೆ ಬಳಸಿಕೊಂಡು, ಅವುಗಳನ್ನು ತೋರಿಸುತ್ತಾ ಅವುಗಳ ಮರೆಯಲ್ಲಿ ಗ್ರಂಥದಲ್ಲಿ ಇಲ್ಲದ ಮತವನ್ನು ಸೃಷ್ಠಿಸಿದ್ದಾರೆ. ಮೊದಲು ಕೆಲವರು ಬೈಬಲ್ ಗ್ರಂಥವನ್ನು ಅಡ್ಡ ಇಟ್ಟುಕೊಂಡು ತಮಗೆ ಒಂದು ಪ್ರತ್ಯೇಕತೆ ಇರಬೇಕೆನ್ನುವ ಉದ್ದೇಶದಿಂದ

ಕ್ರೈಸ್ತ ಮತವನ್ನು ತಯಾರು ಮಾಡಿಕೊಂಡಿದ್ದಾರೆ. ಕ್ರೈಸ್ತ ಮತಕ್ಕೆ ಪ್ರವಕ್ತ ಯೇಸು ಎಂದೂ, ಗ್ರಂಥ ಬೈಬಲ್ ಎಂದೂ ಪ್ರಚಾರ ಮಾಡಿಕೊಂಡಿದ್ದಾರೆ. ಆ ವಿಧವಾಗಿ ಕ್ರೈಸ್ತ ಮತ ತಯಾರಾದಾಗ ಅದಕ್ಕು ಮೊದಲೇ ಇರುವ ಇಂದೂ ಸಮಾಜವನ್ನು ಇಂದೂ ಮತವೆಂದೂ, ಇಂದೂಗಳ ಗ್ರಂಥ ಭಗವದ್ಗೀತೆಯೆಂದೂ ಕೆಲವರು ಇಂದೂಗಳೇ ಪ್ರಚಾರ ಮಾಡಿಕೊಂಡಿದ್ದಾರೆ. ಈ ವಿಧವಾಗಿ ಪೋಟಾ ಪೋಟೀಯಾಗಿ ಒಂದೇ ಬಾರಿ ಎರಡು ಮತಗಳು ತಯಾರಾಗಿವೆ. ನಂತರ ಕಾಲಕ್ರಮದಲ್ಲಿ ಎಷ್ಟೋ ಮತಗಳು ತಯಾರಾದಾಗ 1400 ವರ್ಷಗಳ ಪೂರ್ವ ಇಸ್ಲಾಮ್‌ಮತ ತಯಾರಾಗಿದೆ. ಭಾರತ ದೇಶದಲ್ಲೇ ಬೌದ್ಧ, ಜೈನ, ಸಿಕ್ಕು ಎನ್ನುವ ಮೊದಲಾದ ಚಿಕ್ಕ ಚಿಕ್ಕ ಮತಗಳು ಕೆಲವು ತಯಾರಾದಾಗ ಇತರ ದೇಶಗಳಲ್ಲಿ ಆಯಾ ಪ್ರಾಂತಗಳನ್ನನುಸರಿಸಿ ಸಹ ಕೆಲವು ಮತಗಳು ತಯಾರಾಗಿವೆ. ಎಷ್ಟು ತಯಾರಾದರೂ ಮುಖ್ಯವಾಗಿ ಹೇಳಲಾಗುವವು, ಪ್ರವಕ್ತರಿರುವವು, ಗ್ರಂಥಗಳಿರುವವು ಮೂರು ಮತಗಳೆಂದು ಹೆಸರು ಬಂದಿದೆ. ಉಳಿದ ಮತಗಳನ್ನು ಪಕ್ಕಕ್ಕಿಲ್ಲಿಟ್ಟು ಇಂದೂ, ಇಸ್ಲಾಮ್, ಕ್ರೈಸ್ತ ಮತಗಳನ್ನು ಪರಿಶೀಲಿಸಿದರೆ ಅವುಗಳಿಗೆ ಸಂಬಂಧಿಸಿದ ಮೂರು ಗ್ರಂಥಗಳಲ್ಲಿ ಸ್ವಲ್ಪವಾದರೂ ದೈವ ವಿಷಯಗಳಿರುವಹಾಗೆ ತಿಳಿಯುತ್ತಿದೆ. ಆದ್ದರಿಂದ ಈ ಮೂರು ಗ್ರಂಥಗಳು ದೇವರ ಜ್ಞಾನವನ್ನು ಬೋಧಿಸುತ್ತಿವೆಯೆಂದು, ಅವುಗಳಿಂದಲೇ ದೇವರು ತಿಳಿಯುವನೆಂದು ಅರ್ಥವಾಗುತ್ತಿದೆ.

ಮೂರು ಗ್ರಂಥಗಳಲ್ಲಿನ ಜ್ಞಾನದಿಂದ ದೇವರನ್ನು ತಿಳಿಯಬಹುದು. ಆದರೇ ಮೂರು ಮತಗಳಿಂದ ದೇವರನ್ನು ತಿಳಿಯುವುದಕ್ಕೆ ಅವಕಾಶವಿಲ್ಲ. ಗ್ರಂಥಗಳಲ್ಲಿ ಹೇಳಿರುವುದು ಒಂದು ವಿಧವಾಗಿದ್ದರೇ, ಮತದಲ್ಲಿ ಮತ್ತೊಂದು ವಿಧವಾಗಿ ಇರುತ್ತದೆ. ಗ್ರಂಥವೊಂದರ ಬೋಧನೆಗೂ, ಮತವೊಂದರ ಆಚರಣೆಗೂ ಯಾವ ಸಂಬಂಧ ಇರುವುದಿಲ್ಲ. ಗ್ರಂಥದಲ್ಲಿ ಇರುವುದು ದೈವಜ್ಞಾನವಾದರೇ, ಅದಕ್ಕೆ ವಿಭಿನ್ನವಾಗಿ ಮತ ಆಚರಣೆಗಳಿರುತ್ತವೆ. ಗ್ರಂಥಕ್ಕೂ ಮತಕ್ಕೂ ಎಷ್ಟೋ ವ್ಯತ್ಯಾಸವಿದೆಯೆಂದು ಪ್ರತಿ ಮತದಲ್ಲೂ ಗ್ರಹಿಸಬಹುದು. ಇಂದೂ ಮತವನ್ನು

ನೋಡಿದರೆ ಭಗವದ್ಗೀತೆಯಲ್ಲಿ ಹೇಳಿರುವುದೆಲ್ಲಾ ದೈವಜ್ಞಾನವೇ ಆದಾಗ, ಅದಕ್ಕೆ ಭಿನ್ನವಾಗಿ ಆಚರಣೆಗಳು ಇವೆ. ಅವೆಲ್ಲವೂ ವೇದಗಳೊಳಗಿನವು, ಪುರಾಣಗಳೊಳಗಿನವು ಎಂದು ತಿಳಿಯುತ್ತಿದೆ. ಹಾಗೇ ಇಸ್ಲಾಮ್ ಮತವನ್ನು ನೋಡಿದರೆ, ಮುಸ್ಲೀಮ್‌ರ ಆಚರಣೆಗಳು ಜೀವನ ವಿಧಾನಗಳು ಎಲ್ಲವೂ ಖುರ್‌ಆನ್ ಗ್ರಂಥದಲ್ಲಿ ಇಲ್ಲ. ಆದರೇ ಅವುಗಳಿಗೋಸ್ಕರವೇ ಹದೀಸುಗಳು ಬರೆಯಲಾಗಿವೆ. ಹದೀಸುಗಳ ಪ್ರಕಾರವೇ ಮುಸ್ಲೀಮ್‌ರ ಆಚರಣೆಗಳು ಇವೆ. ಅದೇ ವಿಧವಾಗಿ ಕ್ರೈಸ್ತದಲ್ಲಿನವರ ಆಚರಣೆಗಳನ್ನು ಯೇಸು ಎಂದಿಗೂ ಹೇಳಲಿಲ್ಲ. ಕ್ರೈಸ್ತರೇ ತಮ್ಮಿಷ್ಟಕ್ಕೆ ತಾವೇ ಅವರ ಆಚರಣೆಗಳನ್ನು ಸೃಷ್ಠಿಸಿಕೊಂಡಿದ್ದಾರೆ. ಈ ವಿಧವಾಗಿ ಪ್ರತಿ ಮತದಲ್ಲಿಯೂ ಗ್ರಂಥಗಳಲ್ಲಿನ ದೇವರ ಜ್ಞಾನವನ್ನು ತಿಳಿದವರು ಕಡಿಮೆ ಇದ್ದರೂ, ಮತ ಆಚರಣೆಗಳು ತಿಳಿದವರು ಹೆಚ್ಚಾಗಿರುವರು.

ಮೂರು ದೈವ ಗ್ರಂಥಗಳಲ್ಲಿ ಮತ ಪ್ರಸ್ತಾಪ ಇಲ್ಲದಿದ್ದರೂ ಇಂದೂ, ಇಸ್ಲಾಮ್, ಕ್ರೈಸ್ತವೆನ್ನುವ ಮೂರು ಮತಗಳಲ್ಲಿ ಅವರವರ ಆಚರಣೆಗಳು ಮತವನ್ನನುಸರಿಸಿ ಇವೆ. ಉದಾಹರಣೆಗೆ ದೀಕ್ಷೆ ಎಂದೊ, ಹರಕೆ ಎಂದೊ, ಸನ್ಯಾಸತ್ವ ಎಂದೊ ಯಾವುದೋ ಒಂದು ವಿಧವಾಗಿ ಕೆಲವರು ಗಡ್ಡಗಳನ್ನು ಬೆಳೆಸಿ ಪ್ರತ್ಯೇಕವಾಗಿ ಕಾಣಿಸುತ್ತಿರುವರು. ಭಕ್ತಿ ಭಾವದಲ್ಲಾಗಲೀ, ಜ್ಞಾನ ಮಾರ್ಗದಲ್ಲಾಗಲೀ ನಾವಿದ್ದೇವೆನ್ನುವಹಾಗೆ ಎಷ್ಟೋ ಜನ ಗಡ್ಡಗಳು ಬೆಳೆಸಿ ಕಾಣಿಸುತ್ತಿರುವರು. ಕೆಲವರು ಗಡ್ಡವನ್ನು ಬೆಳೆಸಿ ತಮಗೆ ಗಡ್ಡವಿರುವಹಾಗೆ ತಮ್ಮಲ್ಲಿ ಶಕ್ತಿ ಇರುತ್ತದೆಂದು ಹೇಳಿಕೊಳ್ಳುತ್ತಿರುವರು. ಯಾರು ಏನು ಹೇಳಿಕೊಂಡರೂ ಆಧ್ಯಾತ್ಮಿಕ ಜ್ಞಾನದ ಪ್ರಕಾರ ಮನುಷ್ಯ ಗಡ್ಡ ಬೆಳೆಸಿದರೆ ಯಾವುದೋ ಪ್ರತ್ಯೇಕತೆ ಇರುತ್ತದೆನ್ನುವುದು ಅಸತ್ಯ. ಏಕೆಂದರೆ ಜ್ಞಾನಕ್ಕೆ ಮೂಲ ಗ್ರಂಥಗಳಾದ ಭಗವದ್ಗೀತೆ, ಬೈಬಲ್, ಖುರ್‌ಆನ್‌ಗಳಲ್ಲಿ ಎಲ್ಲೂ ಗಡ್ಡವೊಂದರ ಪ್ರತ್ಯೇಕತೆಯನ್ನು ಕುರಿತು ಬರೆಯಲಿಲ್ಲ. ಅದರಿಂದ ತಾವು ದೊಡ್ಡವರೆಂದು ಪ್ರಕಟಿಸಿಕೊಳ್ಳುವುದಕ್ಕೆ ಮಾತ್ರವೇ ಗಡ್ಡವೆಂದು ಅರ್ಥವಾಗುತ್ತಿದೆ. ಆರೋಗ್ಯಕ್ಕೋ, ಅಂದಕ್ಕೋ, ಗಡ್ಡವನ್ನು ಬೆಳೆಸಿದರೆ ಫರವಾಗಿಲ್ಲ ಆದರೆ, ನಾನು ಜ್ಞಾನಿ ಎನ್ನುವ

ಉದ್ದೇಶದಿಂದ ಮಾತ್ರ ಬೆಳೆಸಬಾರದು. ಹಾಗೆಂದು ಈಗ ಗಡ್ಡವಿರುವವರೆಲ್ಲರನ್ನೂ ಅಜ್ಞಾನಿಗಳೆಂದು ನಾವು ಎನ್ನುತ್ತಿಲ್ಲ ಆದರೆ, ಮೂಲ ಗ್ರಂಥಗಳಲ್ಲಿ ಗಡ್ಡವನ್ನು ಕುರಿತು ಬರೆಯಲಿಲ್ಲ ಎಂದು ಮಾತ್ರ ಹೇಳುತ್ತಿದ್ದೇವೆ. ಮತವನ್ನನುಸರಿಸಿ ಗಡ್ಡವನ್ನು ಬೆಳೆಸುವವರಿದ್ದಾರೆ. ಮತದಲ್ಲಿ ಸ್ವಲ್ಪ ವಯಸ್ಸು ಬಂದ ನಂತರವಾಗಲೀ, ನಾನು ದೇವರ ಮಾರ್ಗದಲ್ಲಿ ಇದ್ದೇನೆನ್ನುವುದಕ್ಕೆ ಗುರುತಾಗಾಗಲೀ, ಗಡ್ಡವನ್ನು ತಪ್ಪದೆ ಬೆಳೆಸುವುದು ಇದೆ. ಇಸ್ಲಾಮ್‌ನಲ್ಲಿ ಗಡ್ಡಕ್ಕೆ ಬೆಲೆ ಇರುವಹಾಗೆ, ಸಿಕ್ಕುಗಳಲ್ಲಿ ಪ್ರತಿ ಒಬ್ಬರೂ ತಪ್ಪದೆ ಗಡ್ಡವನ್ನು ಬೆಳೆಸಬೇಕೆನ್ನುವ ನಿಯಮ ಇದೆ. ಯಾವ ಮತದಲ್ಲಿ ಯಾವ ನಿಯಮವಿದ್ದರೂ ಅದು ಮತವನ್ನನುಸರಿಸಿ ಇರುವುದೇ ಆಗಲೀ, ದೈವಜ್ಞಾನವನ್ನನುಸರಿಸಿ ಮಾತ್ರ ಇರುವುದಿಲ್ಲ. ದೈವಜ್ಞಾನದಲ್ಲಿ ಮೂರು ಗ್ರಂಥಗಳಲ್ಲಿ ಗಡ್ಡವನ್ನು ಬೆಳಸುವುದಾಗಲೀ, ಉಗುರು ಬೆಳಸುವುದಾಗಲೀ ಹೇಳಲಿಲ್ಲ. ಹಾಗೇ ಹೊರಗಿನ ಆಚರಣೆಗಳನ್ನು ಕುರಿತು ಯಾವ ವಿಷಯವನ್ನಾಗಲೀ ಹೇಳಲಿಲ್ಲವೆಂದು ಹೇಳುತ್ತಿದ್ದೇವೆ. ಹೊರಗಿನ ದೀಕ್ಷೆಗಳೆಲ್ಲವು ಮತಕ್ಕೆ ಸಂಬಂಧಿಸಿರುವವೇ ಆಗಲೀ, ದೈವಜ್ಞಾನಕ್ಕೆ ಸಂಬಂಧಿಸಿರುವವಲ್ಲ. ಕೆಲವರು ಗಡ್ಡವನ್ನು ಬೆಳಸಿಕೊಳ್ಳುವುದಕ್ಕೆ ಇರುವ ಮತವನ್ನು ಬಿಟ್ಟು, ಇತರ ಮತಗಳೊಳಗೆ ಹೋದವರನ್ನು ನಾನು ಸ್ವತಃವಾಗಿ ನೋಡಿದ್ದೇನೆ. ನೋಡುವುದೇ ಅಲ್ಲದೆ, "ಕೇವಲ ಗಡ್ಡಕ್ಕೋಸ್ಕರ ನೀವು ಮತವನ್ನು ಬದಲಾಯಿಸಿದ್ದೀರ. ಮೊದಲು ನೀವಿರುವ ಮತದಲ್ಲಿ ಸಹ ಗಡ್ಡವನ್ನು ಬೆಳೆಸಿಕೊಳ್ಳುವ ಅವಕಾಶ ಇದೆ ಅಲ್ಲವೆ ಎಂದು" ನಾನು ಅವರನ್ನು ಪ್ರಶ್ನಿಸುವುದು ಸಹ ನಡೆದಿದೆ. ಆದರೆ ಅದಕ್ಕೆ ಅವರು ಹೇಳಿದ ಸಮಾಧಾನ ವಿಚಿತ್ರವಾಗಿ ಕಾಣಿಸಿತು. ಅಷ್ಟಕ್ಕೂ ಅವರು ಹೇಳಿದ ಸಮಾಧಾನ ಏನೋ ನೋಡಿರಿ. "ಮೊದಲು ನಾವಿರುವ ಮತದಲ್ಲಿ ಗಡ್ಡವನ್ನು ಬೆಳೆಸಿಕೊಳ್ಳಬಹುದಾಗಲೀ, ಬೆಳೆಸಿರುವುದನ್ನು ಮಾತ್ರ ಸ್ವಲ್ಪವೂ ಸಹ ಕತ್ತರಿಸಬಾರದೆನ್ನುವ ನಿಯಮವನ್ನಿಟ್ಟಿದ್ದಾರೆ. ಈಗ ನಾವು ಬದಲಾದ ಮತದಲ್ಲಿ ಗಡ್ಡವನ್ನು ಬೆಳೆಸಿದರೂ ಮೇಲ್ಭಾಗ ಬಾಯಿ ಹತ್ತಿರ ಕತ್ತರಿಸಿಕೊಳ್ಳಬಹುದು. ಅದರಿಂದ ಅನ್ನ ತಿನ್ನುವುದಕ್ಕೆ ಮೀಸೆಗಳು ಅಡ್ಡ ಬರುವುದಿಲ್ಲ. ಪಕ್ಕದಲ್ಲಿ ಸಹ ಕತ್ತರಿಸಿಕೊಳ್ಳಬಹುದು ಆದ್ದರಿಂದ, ಗಡ್ಡವನ್ನು ಅಂದವಾಗಿ ಬೆಳೆಸಿಕೊಳ್ಳಬಹುದು.

ಮೊದಲಿರುವ ಮತದಲ್ಲಿ ಮೇಲೆ ಮೀಸೆಗಳು, ಪಕ್ಕದಲ್ಲಿ ಕೂದಲು ಕತ್ತರಿಸಿಕೊಳ್ಳುವ ಅವಕಾಶ ಇಲ್ಲದಿರುವುದರಿಂದ ಆ ಮತವನ್ನು ಬಿಟ್ಟಿದ್ದೇವೆ" ಎಂದಿದ್ದಾರೆ. ಈ ವಿಧವಾಗಿ ಕೆಲವರು ಗಡ್ಡಕ್ಕೋಸ್ಕರ, ಮೀಸೆಗಳಿಗೋಸ್ಕರ ಮತ ಬದಲಾಯಿಸುವವರಿದ್ದಾರೆಂದು ತಿಳಿಯುತ್ತಿದೆ.

ಹಿಂದೀ ಭಾಷೆಯಲ್ಲಿ ಎಲೆಕ್ಷನ್ ಸಮಯದಲ್ಲಿ ನನಗೆ ಓಟು ಹಾಕಿ ಎಂದು ಕೇಳುವುದಕ್ಕೆ "ಮತ್‌ದಾನ್ ಕರೋ" ಎಂದು ಅನ್ನುತ್ತಿರುತ್ತಾರೆ. ಮತ, ಸಮ್ಮತ ಎರಡೂ ಒಂದೇ ಆಗಿರುವುದರಿಂದ ನಿನ್ನ ಸಮ್ಮತವನ್ನು ನನಗೆ ಕೊಡು ಎಂದು ಕೇಳುವುದಕ್ಕೆ ಮತ್‌ದಾನ್ ಕರೋ ಎಂದು ಕೇಳುತ್ತಿದ್ದಾರೆ. ಸಮ್ಮತವನ್ನು ಮತ ಎಂದು ಅನ್ನಬಹುದು, ಹಾಗೇ ಓಟು ಎಂದು ಸಹ ಎನ್ನಬಹುದು. ಓಟು ಎಂದರೆ ಸಮ್ಮತ ಎಂದೇ ಅರ್ಥ. ಆದ್ದರಿಂದ ಹಿಂದೀ ಭಾಷೆಯಲ್ಲಿ ಮತ ದಾನ ಮಾಡಿ ಎಂದು ಅಭ್ಯರ್ಥಿಗಳು ಕೇಳಿಕೊಳ್ಳುವುದು ನಡೆಯುತ್ತಿದೆ. ಓಟು ಎಂದರೆ ಸಮ್ಮತಿ ಅಥವಾ ಸಮ್ಮತ ಎಂದು ನೆನಪಲ್ಲಿಟ್ಟುಕೊಳ್ಳಬೇಕು. ರಾಜಕೀಯಪಾರ್ಟೀಗಳಿದ್ದಹಾಗೆ ದೇಶದಲ್ಲಿ ಮತಗಳಿರುವುದರಿಂದ ಮನುಷ್ಯ ಇಷ್ಟವಿದ್ದರೂ ಇಷ್ಟವಿಲ್ಲದಿದ್ದರೂ ಯಾವುದೋ ಒಂದು ಮತದಲ್ಲಿಯೇ ಇರುತ್ತಿದ್ದಾನೆ. ಮನುಷ್ಯನ ಹುಟ್ಟುವಿಕೆ ಯಾವುದೋ ಒಂದು ಮತದಲ್ಲಿ ಇರುವುದರಿಂದ, ಮನುಷ್ಯನಿಗಿಂತ ಮೊದಲೇ ಮತ ಅಂಟಿಕೊಳ್ಳುತ್ತಿದೆ. ವಾಸ್ತವಕ್ಕೆ ನಾನು ಹುಟ್ಟಿದಾಗ ನಾನಿರುವ ಮತ ಯಾವುದೋ ನನಗೆ ತಿಳಿದಿಲ್ಲ. ಯುಕ್ತವಯಸ್ಸು ಬರುವುದಕ್ಕಿಂತ ಮೊದಲು ನನ್ನ ಮತ ಇಂತಹದ್ದೆಂದು ತಿಳಿದಿದೆ. ನಾನು ಮತವನ್ನು ಆಯ್ಕೆ ಮಾಡಿಕೊಳ್ಳದಿದ್ದರೂ ಹುಟ್ಟುವಿಕೆಯಿಂದಲೇ ಮತವೇ ನನ್ನನ್ನು ಆಯ್ಕೆ ಮಾಡಿಕೊಂಡಿದೆ. ಅದರಿಂದ ನನ್ನನ್ನು ಇಂತಹ ಮತದವನೆಂದು ಎಲ್ಲರೂ ಎನ್ನುತ್ತಿದ್ದಾರೆ. ಪ್ರತಿ ಮನುಷ್ಯನಿಗೂ ಮತ ಹುಟ್ಟುವುದರಿಂದಲೇ ಬರುತ್ತಿದೆ. ಆದರೇ ಕೆಲವರು ಹುಟ್ಟಿದ ನಂತರ ಹುಟ್ಟುವಿಕೆಯಿಂದ ಬಂದಿರುವ ಮತವನ್ನು ಬಿಟ್ಟು ಇತರ ಮತದಲ್ಲಿ ಸೇರಿಹೋಗುವುದು ಸಹ ನಡೆಯುತ್ತಿದೆ.

ಮನುಷ್ಯ ಯಾವ ಮತದಲ್ಲಿ ಹುಟ್ಟಿದ್ದರೆ, ಆ ಮತವನ್ನೇ ತನ್ನ ಮತವೆಂದುಕೊಳ್ಳುತ್ತಿರುವನು. ಹಾಗೆ ಒಂದು ಮತದಲ್ಲಿ ಹುಟ್ಟಿದಾಗಿನಿಂದ ಇದ್ದೇವೆಂದು, ತನ್ನದು ಯಾವ ಮತವಾದರೂ ತನ್ನ ಮತವನ್ನು ಇತರ ಮತಗಳಿಗಿಂತ ದೊಡ್ಡದಾಗಿ ತಿಳಿಯುತ್ತಾ, ಅದೇ ವಿಧವಾಗಿ ತನ್ನ ಮತವನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುತ್ತಿರುವನು. ಸರ್ವಸಾಧಾರಣವಾಗಿ ಯಾವ ಮನುಷ್ಯ ತನ್ನ ಮತ ಕಡಿಮೆ ಎಂದಾಗಲೀ, ಬೆಲೆ ಇಲ್ಲದ್ದೆಂದಾಗಲೀ, ಕೆಟ್ಟದೆಂದಾಗಲೀ ಅಂದುಕೊಳ್ಳುವುದಿಲ್ಲ. ಇತರ ಮತಗಳೆಷ್ಟಿದ್ದರೂ ಎಲ್ಲದಕ್ಕಿಂತ ತನ್ನ ಮತವನ್ನೇ ದೊಡ್ಡದಾಗಿ ಹೇಳಿಕೊಳ್ಳುವ ಅಭ್ಯಾಸ ಬಹುಶಃ ಎಲ್ಲರಿಗೂ ಇರುತ್ತದೆ. ಇದು ಸಾಧಾರಣ ಮನುಷ್ಯರಿಗೆ ತಮ್ಮ ತಮ್ಮ ಮತಗಳ ಬಗ್ಗೆ ಇರುವ ವಿಧಾನ ಆದಾಗ, ಕೆಲವರು ಮಾತ್ರ ತಮ್ಮ ಮತವನ್ನು ಅವರು ಪ್ರೀತಿಸುವುದೇ ಅಲ್ಲದೆ, ಇತರ ಮತಗಳವರು ಸಹ ಅವರ ಮತವನ್ನು ಬಿಟ್ಟು ತಮ್ಮ ಮತದೊಳಗೆ ಬರುವ ಹಾಗೆ ಮಾಡುತ್ತಿದ್ದಾರೆ. ಸಾಧಾರಣವಾಗಿ ಯಾರ ಮತವನ್ನು ಅವರು ಅಭಿಮಾನಿಸುತ್ತಿದ್ದರೂ, ಅವರ ಮತದ ಮೇಲೆ ಅಭಿಮಾನವನ್ನು ಬಿಟ್ಟು, ಇತರ ಮತದೊಳಗೆ ಬರುವಹಾಗೆ ಮಾಡುವುದಕ್ಕೆ, ಕೆಲವರು ಪ್ರಾವೀಣ್ಯತೆ ಹೊಂದಿದ್ದಾರೆ. ಅಂಥವರನ್ನು ಮತ ಪ್ರಚಾರಕರು ಎಂದು ಹೇಳಬಹುದು. ಮತ ಪ್ರಚಾರಕರಾದವರು ಎಲ್ಲ ವಿಧಗಳಲ್ಲಿ ತರಭೇತಿ ಪಡೆದು, ಎಂಥವನನ್ನಾದರೂ ತನ್ನ ಮತವನ್ನು ಬಿಟ್ಟು ಇತರ ಮತದೊಳಗೆ ಬರುವಹಾಗೆ ಮಾಡಬಲ್ಲರು. ಅಂತಹ ಮತ ಪ್ರಚಾರಕರು ಒಂದು ಹಿಂದೂಮತದಲ್ಲಿ ಹೊರತು ಈಕಡೆ ಮುಸ್ಲೀಮ್ ಮತದಲ್ಲೂ, ಆಕಡೆ ಕ್ರೈಸ್ತ ಮತದಲ್ಲೂ ಇದ್ದಾರೆ.

ನನಗೆ ತಿಳಿದಮಟ್ಟಿಗೆ ಮತ ಪ್ರಚಾರಕರು ಕ್ರೈಸ್ತಮತದಲ್ಲಿ ಹೆಚ್ಚಾಗಿ ಇರುತ್ತಿದ್ದರು. ಆದರೇ ಈ ಮಧ್ಯೆ ಕಾಲದಲ್ಲಿ ಮುಸ್ಲೀಮ್ ಮತದಲ್ಲಿ ಸಹ ಬಹಳ ಜನ ಮತ ಪ್ರಚಾರಕರು ತಯಾರಾಗುವುದು ನಡೆದಿದೆ. ಹಿಂದೂ ಮತದಲ್ಲಿ ಸಹ ಮತ ಪ್ರಚಾರಕರಿದ್ದರೂ ಹೇಳಿಕೊಳ್ಳುವಷ್ಟು ಇಲ್ಲವೆಂದು ಹೇಳಬಹುದು. ಮತ ಪ್ರಚಾರ ಮೂರು ವಿಧಗಳಲ್ಲಿ ಇದೆ. ಒಂದು

ಬೋಧಿಸುವುದರಿಂದ, ಎರಡು ಪ್ರಲೋಭವಿಡುವುದರಿಂದ, ಮೂರು ಹಿಂಸಿಸುವುದರಿಂದ ಮತ ಪ್ರಚಾರ ನಡೆಯುತ್ತಿದೆಯೆಂದು ಹೇಳಬಹುದು. ಆದರೇ ಸಮಾಜದಲ್ಲಿನ ಕೆಲವರು ಮತ ಪ್ರಚಾರ, ಮತಾಂತರಿಸುವುದು ಅನ್ಯಾಯ ಅಕ್ರಮವೆಂದು ಎನ್ನುತ್ತಿರುವಾಗ, ಕೆಲವರು ಕಾನೂನು ವಿರುದ್ಧವೆಂದು ಸಹ ಎನ್ನುತ್ತಿದ್ದಾರೆ. ಹಾಗೆಂದು ಒಬ್ಬನು ಒಂದೇ ಮತದಲ್ಲಿ ಇರಬೇಕೆನ್ನುವುದು, ಇತರ ಮತದೊಳಗೆ ಹೋಗಬಾರದೆನ್ನುವುದು ಮನುಷ್ಯ ಸ್ವತಂತ್ರತೆಗೆ ಭಂಗ ಅಲ್ಲವೆ, ಮನುಷ್ಯ ಇಚ್ಛೆಯನ್ನು (ಇಷ್ಟವನ್ನು) ಅಣಗಿಸಿದಂತಲ್ಲವೆ! ಎಂದು ಕೆಲವರು ಕೇಳಬಹುದು. ಈ ವಿಧವಾಗಿ ಈ ದಿನ ಮತ ಮಾರ್ಪಾಟು ಸಮಾಜದಲ್ಲಿ ದೊಡ್ಡ ಸಮಸ್ಯೆಯಾಗಿ ತಯಾರಾಗಿದೆ. ಕೆಲವರು ನ್ಯಾಯವೆಂದರೇ, ಕೆಲವರು ಅನ್ಯಾಯವೆಂದು ಅನ್ನುತ್ತಿದ್ದಾರೆ. ಕೆಲವರು ಧರ್ಮ ಎಂದರೇ, ಕೆಲವರು ಅಧರ್ಮ ಎನ್ನುತ್ತಿದ್ದಾರೆ. ಈ ವಿಧವಾದ ಎರಡು ವಾದನೆಗಳಲ್ಲಿ ಯಾವುದು ಸರಿಯಾದುದೋ, ಯಾವುದು ಸರಿಯಲ್ಲವೋ ವಿವರಿಸಿಕೊಂಡು ನೋಡಬೇಕಾದ ಅವಶ್ಯವಿದೆ.

ಮತ ಪ್ರಚಾರ ಮೂರು ವಿಧಗಳಲ್ಲಿ ಇದೆಯೆಂದು ಹೇಳಿಕೊಂಡಿದ್ದೇವಲ್ಲವೆ! ಅದರಲ್ಲಿ ಮೊದಲನೆಯದು ತಮ್ಮ ಗ್ರಂಥದಲ್ಲಿನ ಜ್ಞಾನವನ್ನು ಬೋಧಿಸುವುದು. ಭೂಮಿ ಮೇಲೆ ದೈವಜ್ಞಾನ ಮೂರು ವಿಧಗಳಲ್ಲಿ, ಮೂರು ಸಮಯಗಳಲ್ಲಿ ತಿಳಿಸಲಾಗಿರುವುದರಿಂದ, ಮೂರು ಬಾರಿ ಹೇಳಿದ ಜ್ಞಾನ ಮೂರು ಗ್ರಂಥಗಳಾಗಿ ತಯಾರಾಗಿದೆ. ಅವುಗಳಲ್ಲಿ ಮೊದಲನೆಯದು ಭಗವದ್ಗೀತೆಯಾಗಿ, ಎರಡನೆಯದು ಬೈಬಲ್ ಆಗಿ, ಮೂರನೆಯದು ಖುರ್‌ಆನ್ ಗ್ರಂಥಗಳಾಗಿ ಇವೆ. ಭಗವದ್ಗೀತೆ ಹಿಂದೂಗಳ ಗ್ರಂಥವೆಂದು, ಬೈಬಲ್ ಕ್ರೈಸ್ತರ ಗ್ರಂಥವೆಂದು, ಖುರ್‌ಆನ್ ಮುಸ್ಲೀಮ್‌ರ ಗ್ರಂಥವೆಂದು ಮೂರು ಮತದವರೂ ನಿರ್ಣಯಿಸಿಕೊಂಡಿದ್ದಾರೆ. ವಾಸ್ತವಕ್ಕೆ ಮೂರು ಗ್ರಂಥಗಳು ಯಾವ ಮತಕ್ಕೂ ಸಂಬಂಧಿಸಿರುವವಲ್ಲ. ಮೂರು ದೈವ ಗ್ರಂಥಗಳು ಸಮಸ್ತ ಮಾನವರಿಗೂ ಸಂಬಂಧಿಸಿರುವವೆಂದು ಮರೆಯಬಾರದು. ದೇವರು ಇಂತಹ ಮತದವರಿಗೆ

ಇಂತಹ ಗ್ರಂಥ ಕೊಡುತ್ತಿದ್ದೇನೆಂದು ಹೇಳದಿದ್ದರೂ ಮನುಷ್ಯರೇ ಸ್ವತಃವಾಗಿ ಇಂತಹ ಗ್ರಂಥ ಇಂತಹ ಮತಕ್ಕೆ ಸಂಬಂಧಿಸಿರುವುದೆಂದು ಹೇಳಿಕೊಳ್ಳುವುದು ನಡೆಯುತ್ತಿದೆ. ಕ್ರೈಸ್ತರು ಬೈಬಲ್ ಗ್ರಂಥವನ್ನು, ಮುಸ್ಲೀಮ್‌ರು ಖುರ್‌ಆನ್ ಗ್ರಂಥವನ್ನು ತಮ್ಮ ಗ್ರಂಥಗಳಾಗಿ ಹೇಳಿಕೊಳ್ಳುತ್ತಾ, ಅವರ ಮತ ಪ್ರಚಾರದಲ್ಲಿ ಆ ಗ್ರಂಥಗಳನ್ನು ಬಳಸಿಕೊಳ್ಳುತ್ತಾ, ಆ ಗ್ರಂಥಗಳಲ್ಲಿನ ಜ್ಞಾನವನ್ನು ಬೋಧಿಸುತ್ತಾ ತಮ್ಮ ಮತವನ್ನು ಪ್ರಚಾರ ಮಾಡುತ್ತಿದ್ದಾರೆ.

ಮೂರು ಗ್ರಂಥಗಳಲ್ಲಿ ಒಂದೇ ದೇವರನ್ನು ಕುರಿತಿರುವ ಒಂದೇ ಜ್ಞಾನವಿದ್ದರೂ ಅದು ತಿಳಿಯದೆ, ಮೂರು ಬಾರಿ ಮೂರು ಕಾಲಗಳಲ್ಲಿ ಬಂದಿರುವ ಜ್ಞಾನವನ್ನು ಮೂರು ಗ್ರಂಥಗಳಾಗಿ ಮಾಡಿಕೊಳ್ಳುವುದು ನಡೆದಿದೆ. ಯಾವುದು ಏನಾದರೂ ಯಾವ ದೈವ ಗ್ರಂಥದಲ್ಲಿನ ಜ್ಞಾನವನ್ನು ಹೇಳಿದರೂ, ಅದು ದೇವರಿಗೆ ಸಂಬಂಧಿಸಿರುವುದೇ ಆಗಲಿ ಮತಕ್ಕೆ ಸಂಬಂಧಿಸಿರುವುದಲ್ಲ. ಆದರೂ ಬೈಬಲ್‌ನಲ್ಲಿನ ಜ್ಞಾನಕ್ಕೆ ಕ್ರೈಸ್ತಮತವನ್ನು ಜೋಡಿಸುವುದು ನಡೆಯುತ್ತಿದೆ. ಹಾಗೇ ಖುರ್‌ಆನ್‌ನಲ್ಲಿನ ಜ್ಞಾನಕ್ಕೆ ಮುಸ್ಲೀಮ್ ಮತವನ್ನು ಜೋಡಿಸುವುದು ನಡೆಯುತ್ತಿದೆ. ಕಳೆದ ಐವತ್ತು ವರ್ಷಗಳಿಂದ ಬೈಬಲ್ ಗ್ರಂಥದಲ್ಲಿನ ಬೋಧನೆಗಳು ಹೇಳುತ್ತಾ ಕ್ರೈಸ್ತ ಮತ ಪ್ರಚಾರಕರು ತಮ್ಮ ಮತವನ್ನು ಹೆಚ್ಚಾಗಿ ಪ್ರಚಾರ ಮಾಡಿದ್ದಾರೆ. ಅಷ್ಟೇ ಅಲ್ಲದೆ ಎಷ್ಟೋ ಜನ ಹಿಂದೂಗಳನ್ನು ಕ್ರೈಸ್ತರಾಗಿ ಬದಲಾಯಿಸಿ ಕೊಂಡಿದ್ದಾರೆ. ಮತ ಪ್ರಚಾರ ಮೂರು ವಿಧಗಳಿದ್ದರೂ ಕ್ರೈಸ್ತರು ಮಾತ್ರ ಒಂದು ಬೈಬಲ್‌ನಲ್ಲಿನ ಬೋಧನೆಗಳು ಹೇಳಿ ಇತರರನ್ನು ತಮ್ಮ ಮತದೊಳಗೆ ಸೇರಿಸಿಕೊಳ್ಳುವುದೇ ಅಲ್ಲದೆ, ಎರಡನೆ ವಿಧಾನದ ಪ್ರಕಾರ ಲಾಭ ಕೈಗೂಡುತ್ತದೆಂದು, ರೋಗಗಳು ಹೋಗುತ್ತವೆಂದು ಹೇಳಿ, ಪಾಪಗಳು ಕ್ಷಮಿಸಲ್ಪಡುವವು ಎಂದು ಹೇಳಿ, ಉದ್ಯೋಗಗಳ ಆಸೆ ತೋರಿಸೋ, ಆಹಾರದ ಆಸೆ ತೋರಿಸೋ, ಯಾವುದೋ ಒಂದು ವಿಧವಾಗಿ ಪ್ರಲೋಭವಿಟ್ಟು ಇತರರನ್ನು ತಮ್ಮ ಮತದೊಳಕ್ಕೆ ಬದಲಾಯಿಸಿಕೊಳ್ಳುವುದು ನಡೆಯುತ್ತಿದೆ. ಈ ದಿನ ಸಹ ಅದೇ ವಿಧಾನ ನಡೆಯುತ್ತಿದೆ. ಒಂದು ಬೊಧನೆಗಳು ಹೇಳುವುದು, ಎರಡು

ಪ್ರಲೋಭವಿಡುವುದರಿಂದ ಕ್ರೈಸ್ತ ಮತ ಪೂರ್ತಿ ಪ್ರಚಾರವಾಗಿದೆ. ಮೂರನೆ ವಿಧಾನದ ಪ್ರಕಾರ ದೌರ್ಜನ್ಯ ಮಾಡಿಯಾಗಲೀ, ಹೆದರಿಸಾಗಲೀ, ಹಿಂಸಿಸಾಗಲೀ ಮತ ಮಾರ್ಪಾಟು ಮಾಡಲಿಲ್ಲ.

ಎಲ್ಲಿ ಮತ ಪ್ರಚಾರ ನಡೆಯುತ್ತಿದೆಯೋ ಅಲ್ಲಿ ಮತ ಮಾರ್ಪಾಟು ನಡೆಯುತ್ತದೆಂದೇ ಹೇಳಬಹುದು. ಆದರೇ ಮತ ಪ್ರಚಾರಕರು ತಾವು ಮಾಡುತ್ತಿರುವುದು ಮತ ರಕ್ಷಣೆಯೇ ಆಗಲೀ, ಮತ ಮಾರ್ಪಾಟು ಅಲ್ಲ ಎಂದು ಹೇಳುತ್ತಿದ್ದಾರೆ. ಅವರ ದೃಷ್ಠಿಯಲ್ಲಿ ಮತವನ್ನು ಬೆಳಿಸಿಕೊಳ್ಳುವುದನ್ನು ಮತರಕ್ಷಣೆಯಾಗಿ ಹೇಳಿಕೊಳ್ಳುತ್ತಿದ್ದಾರೆ. ಅವರು ಹೇಗೆ ಹೇಳಿದರೂ ಒಂದು ಮತದವನು ತನ್ನ ಮತವನ್ನು ಬಿಟ್ಟು ಮತ್ತೊಂದು ಮತದಲ್ಲಿ ಸೇರುವುದನ್ನು ಮತ ಮಾರ್ಪಾಟೆಂದೇ ಹೇಳಬಹುದು. ಮೊದಲು ಗ್ರಂಥದಲ್ಲಿನ ಜ್ಞಾನವನ್ನು ಹೇಳಿ ಮತ ಪ್ರಚಾರ ಮಾಡುತ್ತಾ ಮತವನ್ನು ಬೆಳಸಿಕೊಳ್ಳುವವರು, ಎರಡನೆ ವಿಧಾನದಿಂದ ಪ್ರಲೋಭವಿಡುತ್ತಾ ಪ್ರಚಾರ ಮಾಡಲಾರಂಭಿಸಿ, ಎರಡನೆ ವಿಧಾನದಿಂದ ಸುಲಭವಾಗಿ ಬಹಳ ಜನರನ್ನು ತಮ್ಮ ಮತದಲ್ಲಿ ಸೇರಿಸಿಕೊಂಡಿದ್ದಾರೆ. ಭಾರತದೇಶದಲ್ಲಿ ಐವತ್ತು ವರ್ಷಗಳ ಕೆಳಗೆ ಕ್ರೈಸ್ತ ಮತ ಕಡಿಮೆ ಇತ್ತು. ಅಂದಿನಿಂದ ಇಂದಿನವರೆಗು ಅವರು ಮಾಡುವ ಎರಡು ವಿಧಗಳ ಪ್ರಚಾರದಿಂದ ಕ್ರೈಸ್ತ ಮತ ಚೆನ್ನಾಗಿ ಬೆಳೆದುಹೋಗಿದೆ. ಹಿಂದೂ ಮತ ಕಡಿಮೆಯಾಗಿದೆ. ಹಿಂದೂಗಳಾಗಿರುವವರು ಬಹಳ ಜನ ಕ್ರೈಸ್ತರಾಗಿ ಬದಲಾಗಿಹೋಗುವುದು ನಡೆದಿದೆ. ಕಾಲ ಕಳೆಯುತ್ತಿದ್ದಂತೆ ಕ್ರೈಸ್ತರು ಹೊಸದಾಗಿ ಮತ್ತೊಂದು ವಿಧಾನವನ್ನು ಅವಲಂಬಿಸಿ, ಹಿಂದೂಗಳ ವೇದಗಳನ್ನು ಪರಿಶೋಧಿಸಿ, ಅವುಗಳಲ್ಲಿ ತಮಗೆ ಅನುಕೂಲವಾದ ಸಂಸ್ಕೃತ ಶ್ಲೋಕಗಳನ್ನು ಕಲಿತು ಅವುಗಳನ್ನು ಹೇಳುತ್ತಾ, ವೇದಗಳಲ್ಲಿ ಯೇಸು ಪ್ರಸ್ತಾಪನೆ ಇದೆಯೆಂದು ಹೇಳಿ, ತಮ್ಮ ಮತವನ್ನು ಪ್ರಚಾರ ಮಾಡುವುದಕ್ಕೆ ಪ್ರಾರಂಭಿಸಿದ್ದಾರೆ. ಹಿಂದೂಗಳಿಗೆ ವೇದಗಳು ಮುಖ್ಯವೆಂದು ತಿಳಿದು, ವೇದಗಳನ್ನು ಉಪಯೋಗಿಸಿಕೊಂಡು ಕ್ರೈಸ್ತನ್ನು ಪ್ರಚಾರ ಮಾಡಬೇಕೆಂದುಕೊಂಡು, ವೇದಗಳಲ್ಲಿ ರಕ್ತಪ್ರೋಕ್ಷಣೆ, ಪಾಪ

ಪರಿಹಾರ ಎಂಬ ಮಾತು ಇದೆಯೆಂದೂ, ರಕ್ತವನ್ನು ಚಿಮ್ಮಿಸುವುದರಿಂದ ಪಾಪ ಹೋಗುತ್ತದೆಂದು, ಅದಕ್ಕೇ ಯೇಸು ತನ್ನ ರಕ್ತವನ್ನು ಚಿಮ್ಮಿಸಿ ಮನುಷ್ಯರ ಪಾಪವನ್ನು ಇಲ್ಲದಂತೆ ಮಾಡಿದ್ದಾನೆಂದು, ಯೇಸನ್ನು ವಿಶ್ವಾಸಿಸಿದವರಿಗೆ ಪಾಪ ಹೋಗುತ್ತದೆಂದು, ಅವರು ಮಾಡಿಕೊಂಡ ಪಾಪ ಕ್ಷಮಿಸಲಾಗುವುದೆಂದು ಹೇಳುವುದರಿಂದ, ಪಾಪಿಗಳಿಗೆ ಒಂದು ಕ್ರೈಸ್ತ ಮತದಲ್ಲಿ ಹೊರತು ಯಾವ ಮತದಲ್ಲೂ ಕ್ಷಮಾಪಣೆ ಇಲ್ಲವೆಂದು ಹೇಳುವುದರಿಂದ, ಬಹಳ ಜನ ಹಿಂದೂಗಳು ಕ್ರೈಸ್ತ ಮತದಲ್ಲಿ ಸೇರುವುದು ನಡೆದಿದೆ. ಕ್ರೈಸ್ತ ಬೋಧನೆಗಳಿಗೆ ಬಗ್ಗದ ಹಿಂದೂಗಳನ್ನು ಯಾವುದೋ ಒಂದು ಆಸೆ ತೋರಿಸಿ ಪ್ರಲೋಭವಿಟ್ಟು ಕ್ರೈಸ್ತ ಮತದೊಳಕ್ಕೆ ಬದಲಾಯಿಸಿ ಕೊಳ್ಳುತ್ತಿದ್ದಾರೆ. ಎಂತಹ ಸ್ವಮತ ಅಭಿಮಾನಿ ಆದರೂ ಕೆಲವು ಸಂದರ್ಭಗಳಲ್ಲಿ ಪ್ರಲೋಭಗಳಿಗೆ ಒಳಗಾಗಿ, ತನ್ನ ಮತವನ್ನು ಬಿಟ್ಟು ಪರಮತದಲ್ಲಿ ಸೇರಿಹೋಗುತ್ತಿದ್ದಾರೆನ್ನುವುದಕ್ಕೆ, ನನಗೆ ತಿಳಿದ ವಿಷಯವನ್ನು ಸಾಕ್ಷಿಯಾಗಿ ಹೇಳುತ್ತಿದ್ದೇನೆ ನೋಡಿರಿ.

ಕೆಲವು ವರ್ಷಗಳ ಕೆಳಗೆ ನನಗೆ ತಿಳಿದ ಒಬ್ಬ ವ್ಯಕ್ತಿ ಹಿಂದೂವಾಗಿದ್ದು, ಹಿಂದೂಮತವನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ ಪರಮತಗಳನ್ನು ಕಡಿಮೆಯಾಗಿ ಹೇಳುತ್ತಿದ್ದನು. ಸ್ವಮತಾಭಿಮಾನದಿಂದ ಪರಮತ ದೂಷಣೆ ಮಾಡುತ್ತಿದ್ದನು. ಕ್ರೈಸ್ತರನ್ನು ಪೂರ್ತಿಯಾಗಿ ದ್ವೇಷಿಸಿವುದು, ದೂಷಿಸುವುದು ಮಾಡುವುದೇ ಅಲ್ಲದೆ, ಯೇಸು ಹೆಸರನ್ನು ಹೇಳಿದರೆ ರೇಗಾಡುತ್ತಿದ್ದನು. ಅಂತಹ ಸ್ಥಿತಿಯಲ್ಲಿ ತನ್ನ ಹಿಂದೂ ಮತವನ್ನು ಅಭಿಮಾನಿಸುವುದೇ ಅಲ್ಲದೆ, ಕ್ರೈಸ್ತರಿಂದ ಹಿಂದೂ ಮತ ಕ್ಷೀಣಿಸಿ ಹೋಗುತ್ತಿದೆಯೆಂದು, ಕ್ರೈಸ್ತರು ಹಿಂದೂಮತದಲ್ಲಿನವರನ್ನು ಮೋಸಮಾಡಿ, ಪ್ರಲೋಭವಿಟ್ಟು ಅವರ ಮತದೊಳಕ್ಕೆ ಬದಲಾಯಿಸಿ ಕೊಳ್ಳುತ್ತಿದ್ದಾರೆಂದು ಬಾಧೆಪಡುತ್ತಿದ್ದನು. ಅಂತಹ ವ್ಯಕ್ತಿಯನ್ನು ಸುಮಾರು ಮೂವತ್ತು ವರ್ಷಗಳ ನಂತರ ನಾನು ನೋಡುವುದು ನಡೆದಿದೆ. ಆದರೆ ನಾನು ಆಗ ನೋಡಿದ ವ್ಯಕ್ತಿತ್ವ ಆತನಲ್ಲಿ ಕಾಣಿಸದಂತೆ ಹೋಗಿದೆ. ಆ ದಿನ ಕ್ರೈಸ್ತ ಮತವನ್ನು ದೂಷಿಸಿದ ವ್ಯಕ್ತಿ ಈ ದಿನ ನೇರವಾಗಿ ಕ್ರೈಸ್ತ ಮತದಲ್ಲೇ

ಸೇರಿಹೋಗಿದ್ದಾನೆ. ಆತನು ಕ್ರೈಸ್ತರು ತೋರಿಸುವ ಆಸೆಗೆ ಪ್ರಲೋಭಪಟ್ಟು, ಹಿಂದೂಮತವನ್ನು ಬಿಟ್ಟು ಕ್ರೈಸ್ತ ಮತದೊಳಕ್ಕೆ ಹೋಗುವುದು ನಡೆದಿದೆ. ಆತನಿಗೆ ಹೆಣ್ಣುಮಕ್ಕಳಿರುವುದರಿಂದ ಅವರಿಗೆ ಮದುವೆಗಳು ಮಾಡಿ ಗಂಡನ ಮನೆಗೆ ಕಳುಹಿಸಿದ ನಂತರ ಹೆಂಡತಿ ಸತ್ತುಹೋಗಿ ತಾನು ಒಂಟಿಯಾಗಿದ್ದಾನೆ. ಆತನಿಗೆ ಆಸ್ಥಿಗಳಿದ್ದರೂ, ಬದುಕುವುದಕ್ಕೆ ಬರ ಇಲ್ಲದಿದ್ದರೂ, ಉಚಿತವಾಗಿ ಅನ್ನ ಇಟ್ಟು ಪೋಷಿಸುವ ವೃದ್ಧಾಶ್ರಮದ ಕಡೆ ಆತನ ದೃಷ್ಠಿ ಹೋಗಿದೆ. ಒಂದು ಕ್ರೈಸ್ತ ಸಂಸ್ಥೆಯವರು ವೃದ್ಧಾಶ್ರಮವನ್ನು ಸ್ಥಾಪಿಸಿ ವೃದ್ಧರಿಗೆ ಜೀವನಾಂತ್ಯದವರೆಗೂ ಉಚಿತವಾಗಿ ಊಟ ಇಡುವುದೂ, ಆರೋಗ್ಯ ಸಮಸ್ಯೆಗಳು ಬಂದರೆ ಉಚಿತವಾಗಿ ಚಿಕಿತ್ಸೆ ಮಾಡಿಸುವುದೂ ಮಾಡುತ್ತಿದ್ದರು. ಅಷ್ಟೇ ಅಲ್ಲದೆ ಆಯುಷ್ಷು ಮುಗಿದು ಸತ್ತುಹೋದವರನ್ನು ಅವರೇ ಅವರ ಜಾಗದಲ್ಲೇ ಹೂತಿಡುವುದು ಸಹ ಮಾಡುತ್ತಾ, ಅಂತ್ಯಕ್ರಿಯೆಗಳ ದಿಗಿಲು ಸಹ ಇಲ್ಲದಂತೆ ಮಾಡುತ್ತಿದ್ದರು. ಆದರೇ ಅಲ್ಲಿ ಒಂದು ನಿಯಮ ಇದೆ. ಆ ವೃದ್ಧಾಶ್ರಮದೊಳಗೆ ಸೇರಬೇಕೆಂದುಕೊಳ್ಳುವವರು ಯೇಸನ್ನು ವಿಶ್ವಾಸಿಸಿ ಕ್ರೈಸ್ತ ಮತದೊಳಗೆ ಸೇರಬೇಕು. ನಂತರ ವೃದ್ಧಾಶ್ರಮದಲ್ಲಿರುವ ಚರ್ಚಿನಲ್ಲಿ ಪ್ರತಿ ದಿನ ಪ್ರಾರ್ಥನೆ ಮಾಡಬೇಕು.

ವೃದ್ಧಾಶ್ರಮದಲ್ಲಿ ಎಲ್ಲಾ ಉಚಿತವಾಗಿ ಸಿಗುವ ಅವಕಾಶವಿರುವುದರಿಂದ, ಒಂಟಿಯಾಗಿದ್ದ ನನಗೆ ತಿಳಿದ ಆ ವ್ಯಕ್ತಿ ಆ ವೃದ್ಧಾಶ್ರಮದಲ್ಲಿ ಸೇರಿದ್ದಾನೆ. ಆತನು ವೃದ್ಧಾಶ್ರಮದಲ್ಲಿ ಸೇರಿ, ಕ್ರೈಸ್ತನಾಗಿ ಬದಲಾದ ನಂತರ ಒಂದು ದಿನ ನಾನು ಆತನೊಂದಿಗೆ ಭೇಟಿಯಾಗಿ ಮಾತನಾಡುವುದು ನಡೆದಿದೆ. ನಮ್ಮ ಸಂಭಾಷಣೆ ಈ ವಿಧವಾಗಿ ಇದೆ ನೋಡಿರಿ.

**ನಾನು :–** ಏನಯ್ಯಾ! ಒಂದು ಸಮಯದಲ್ಲಿ ನೀನು ಹಿಂದೂಮತವನ್ನು ಕುರಿತು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಪರ ಮತವಾದ ಕ್ರೈಸ್ತಮತವನ್ನು ದೂಷಿಸುತ್ತಿದ್ದೆ. ಅಂತಹ ನೀನು ಹಿಂದೂಮತವನ್ನು ಬಿಟ್ಟು ಕ್ರೈಸ್ತಮತದಲ್ಲಿ ಸೇರಿವುದೇನು? ಪೂರ್ವದಲ್ಲಿ ಹಿಂದೂಮತವನ್ನು ಅಭಿಮಾನಿಸುತ್ತಾ ಕ್ರೈಸ್ತ

ಮತವನ್ನು ದೂಷಿಸುತ್ತಿದ್ದೆ ಅಲ್ಲವೆ! ನೀನು ಬದಲಾಗಿ ಹೋಗುವುದಕ್ಕೆ ಕಾರಣವೇನು?

**ಆತನು :–** ಆ ಸಮಯದಲ್ಲಿ ನಾನು ತಿಳಿಯದೆ ಮಾತನಾಡಿದ್ದೇನೆ. ಹಿಂದೂಮತದಲ್ಲಿನ ಯಾವ ದೇವರೂ ನನಗೆ ಏನೂ ಮಾಡಲಿಲ್ಲ. ವಯಸ್ಸಾದಮೇಲೆ ಎಲ್ಲಾ ವಿಧಗಳಲ್ಲಿ ನನಗೆ ಒಳ್ಳೆಯದು ನಡೆಯುವಹಾಗೆ ಮಾಡಿದ ಈ ದೇವರೇ ಮೇಲು ಅಲ್ಲವೆ! ನನಗೆ ಮನೆಹತ್ತಿರ ಇಲ್ಲದ ಊಟ ಸೌಕರ್ಯಗಳು ಇಲ್ಲಿ ಇವೆ. ಎರಡೂ ಹೊತ್ತು ರುಚಿಯಾದ ಊಟ ಕೊಡುತ್ತಿದ್ದಾರೆ. ಬೆಳಗ್ಗೆ ಪ್ರತಿ ದಿನ ಒಂದು ಟಿಫಿನ್ ಇಡುತ್ತಿದ್ದಾರೆ. ಈ ದಿನ ದೋಸೆ ಇಟ್ಟರೇ, ನಾಳೆ ಪೂರೀ, ನಾಡಿದ್ದು ಉಪ್ಪಿಟ್ಟು ಹೀಗೆ ನಮ್ಮ ಮನೆ ಹತ್ತಿರವೂ ಸಹ ಸಿಗದ ಊಟ ಸಿಗುತ್ತಿದೆ. ಎಲ್ಲಾ ಉಚಿತವಾಗಿ ಇಡುವ ಈ ದೇವರು ಹಿಂದೂ ದೇವರಿಗಿಂತ ಮೇಲು ಅಲ್ಲವೆ!

**ನಾನು :–** ನಿನಗೆ ಆಸ್ತಿಗಳು ಇಲ್ಲವೆ, ಆಸ್ತಿಗಳು ಮಾರಿಕೊಂಡು ತಿಂದರೆ ನೀನು ಸಾಯುವವರೆಗು ಹಾಯಾಗಿ ಬದುಕಬಹುದಲ್ಲವೆ! ನೀನು ಉಚಿತವಾಗಿ ಬರುವ ತಿಂಡಿಗೋಸ್ಕರ ಮತವನ್ನು ಬದಲಾಯಿಸಿಕೊಂಡಿದ್ದೀಯ. ಮೇಲಾಗಿ ಹಿಂದೂ ದೇವರು ಏನು ಮಾಡಿದ್ದಾನೆ, ಯೇಸೇ ಒಳ್ಳೆಯದು ಮಾಡಿದ್ದಾನೆ ಎಂದು ಹೇಳುತ್ತಿದ್ದೀಯ. ಯೇಸು, "ನನ್ನನ್ನು ನಂಬಿಕೊಂಡರೇ, ಕ್ರೈಸ್ತಮತದೊಳಗೆ ಬಂದರೆ ಊಟ ಚೆನ್ನಾಗಿ ಇಡುತ್ತೇನೆಂದು" ಎಲ್ಲಾದರೂ ಹೇಳಿದ್ದಾನಾ? ಆತನು ಹೇಳಿದ ಬೈಬಲ್ ಗ್ರಂಥದಲ್ಲಿ ಸ್ವತಃವಾಗಿ ಯೇಸು ಮಾತನಾಡಿದ ನಾಲ್ಕು ಸುವಾರ್ತೆಗಳಲ್ಲಿ ನನಗೆ ಒಂದು ಮತವಿದೆಯೆಂದಾಗಲೀ, ಆ ಮತದೊಳಕ್ಕೆ ಸೇರು ಎಂದಾಗಲೀ ಹೇಳಿದ್ದಾನಾ? ಯೇಸು ಎಲ್ಲೂ ಹೇಳದ ಮಾತುಗಳು ನೀನು ಹೇಳುತ್ತಿದ್ದೀಯ. ನಿನ್ನ ಲಾಭಕ್ಕೋಸ್ಕರ, ನಿನ್ನ ಸುಖಕ್ಕೋಸ್ಕರ ಹಿಂದೂಮತ ವನ್ನು ಬಿಟ್ಟು ಕ್ರೈಸ್ತ ಮತದಲ್ಲಿ ಸೇರಿಹೋಗುವುದೇ ಅಲ್ಲದೆ, ಹಿಂದೂ ಮತದ ದೇವರಿಗಿಂತ ಕ್ರೈಸ್ತ ಮತದ ದೇವರು ಮೇಲು ಎನ್ನುತ್ತೀಯಾ! ನಾನು ಕ್ರೈಸ್ತ ಮತಕ್ಕೆ ದೇವರು ಎಂದು ಯೇಸು ಎಲ್ಲಾದರೂ ಹೇಳಿದ್ದಾನಾ? ಮತವ್ಯಾಪ್ತಿ

ಗೋಸ್ಕರ ಕೆಲವರು ತಮ್ಮ ಮತ ಪ್ರಚಾರದಲ್ಲಿ ಲಾಭಗಳು ತೋರಿಸಿದರೆ, ಅವುಗಳಿಗೆ ಪ್ರಲೋಭಪಟ್ಟ ನಿನ್ನಂಥವರು ಲಾಭಗಳಿಗೋಸ್ಕರ ಇರುವ ಮತವನ್ನು ಬಿಟ್ಟು ಪರಮತದಲ್ಲಿ ಸೇರುತ್ತಿದ್ದಾರೆ. ನೀನು ಮಾಡಿರುವುದು ಪೂರ್ತಿ ತಪ್ಪು.

**ಆತನು :–** ನಾನು ಮತ ಬದಲಾಗುವುದು ತಪ್ಪೆಂದು ನೀನು ಹೇಳುತ್ತಿದ್ದೀಯಲ್ಲವೆ! ಮತ ಬದಲಾದರೆ ತಪ್ಪೆಂದು ಎಲ್ಲಾದರೂ ಯಾವ ದೇವರಾದರೂ ಹೇಳಿದ್ದಾನಾ? ಭಗವದ್ಗೀತೆಯಲ್ಲಿ ನಿಮ್ಮ ದೇವರು ಹೇಳಿದ್ದಾನಾ? ಬೈಬಲ್‌ನಲ್ಲಿ ನಮ್ಮ ದೇವರು ಹೇಳಿದ್ದಾನಾ?

**ನಾನು :–** ದೇವರು ಭಗವದ್ಗೀತೆಯಲ್ಲಿ ಹೇಳಿದ ಜ್ಞಾನದಲ್ಲಿ ಮತಗಳ ಪ್ರಸ್ತಾಪವೇ ಇಲ್ಲ. ಹಾಗೇ ಮತ ಎನ್ನುವುದೇ ಇಲ್ಲದ ಆ ಕಾಲದಲ್ಲಿ ಯೇಸು ಹೇಳಿದ ಜ್ಞಾನದಲ್ಲಿ ಸಹ ಮತಗಳ ಪ್ರಸ್ತಾಪ ಇಲ್ಲ. ಆದ್ದರಿಂದ ಮತಗಳ ಮಾರ್ಪಾಟನ್ನು ಕುರಿತಾಗಲೀ, ಮತಗಳನ್ನು ಕುರಿತಾಗಲೀ ಹೇಳಲಿಲ್ಲ. ನಂತರ ಕಾಲದಲ್ಲಿ ಹೇಳಿದ ಖುರ್‌ಆನ್ ಗ್ರಂಥದಲ್ಲಿ ಸ್ವಲ್ಪ ಸೂಚನೆಯಾಗಿ ಜ್ಞಾನ ವಿಷಯವನ್ನು ಜಿಬ್ರಯೇಲ್ ಗ್ರಹ (ಕಾಣಿಸದ ಜ್ಞಾನಿ) ಹೇಳಿರುವಾಗ ಅವುಗಳನ್ನು ಮತ ವಿಷಯಗಳಾಗಿ ಕೆಲವರು ಅರ್ಥ ಮಾಡಿಕೊಂಡಿದ್ದಾರೆ. ಆ ವಿಷಯಗಳು ನಿನಗೆ ಹೇಳಿದರೂ ಅರ್ಥವಾಗುವುದಿಲ್ಲ. ಕುಂಟ ಮೊಲವನ್ನು ಹಿಡಿದುಕೊಂಡವನು "ನಾನು ಹಿಡಿದುಕೊಂಡ ಮೊಲಕ್ಕೆ ಮೂರೇ ಕಾಲು" ಎಂದಿದ್ದಾನಂತೆ. ಅದೇ ರೀತಿ ನಿನ್ನ ಲಾಭಕ್ಕೋಸ್ಕರ ಮತ ಬದಲಾಗಿ ನಾನು ಹಿಡಿದುಕೊಂಡ ದೇವರೇ ದೊಡ್ಡವ ಎಂದು ಹೇಳುತ್ತಿದ್ದೀಯ. ಕುಂಟ ಮೊಲಕ್ಕೆ ಮೂರು ಕಾಲುಗಳು ಎಂದು ಹೇಳುವುದರಲ್ಲಿ ಅವನದು ಎಷ್ಟು ಸತ್ಯವೆಂದು ಅವನು ಅಂದುಕೊಳ್ಳುತ್ತಿರುವನೋ, ಹಾಗೇ ಈ ದೇವರೇ ದೊಡ್ಡವ ಎಂದು ಹೇಳುತ್ತಿದ್ದೀಯ. ಈಗ ಏನು ಹೇಳಿದರೂ ನನ್ನದೇ ಸತ್ಯ ನಿಮ್ಮದೇ ಅಸತ್ಯವೆಂದು ಹೇಳುತ್ತೀಯ. ಆದ್ದರಿಂದ ನಿನ್ನೊಂದಿಗೆ ಮಾತನಾಡುವುದಕ್ಕಿಂತ ಸುಮ್ಮನಿರುವುದು ಒಳ್ಳೆಯದು.

ಇದು ಹಿಂದೂಮತದಿಂದ ಕ್ರೈಸ್ತ ಮತದೊಳಗೆ ಬದಲಾದ ಒಬ್ಬ ವ್ಯಕ್ತಿಯೊಂದಿಗೆ ಪ್ರತ್ಯಕ್ಷವಾಗಿ ನಾನು ಸ್ವತಃವಾಗಿ ಮಾತನಾಡಿರುವ ವಿಷಯ.

ಇಲ್ಲಿರುವ ಮತವನ್ನು ಬಿಟ್ಟು ಹೊಸ ಮತದಲ್ಲಿ ಸೇರಿದವನದು ತಪ್ಪಾ ಎಂದರೆ ಸಿಕ್ಕಿರುವ ಮೊಲಕ್ಕೆ ಮೂರು ಕಾಲುಗಳು ಇವೆ ಆದ್ದರಿಂದ, ಅವನು ಹಿಡಿದುಕೊಂಡ ಮೊಲಕ್ಕೆ ಮೂರು ಕಾಲು ಇವೆಯೆನ್ನುವುದರಲ್ಲಿ ಪೂರ್ತಿಯಾಗಿ ಅವನ ತಪ್ಪಿಲ್ಲವೆಂದು ಹೇಳಬಹುದು. ಎಲ್ಲ ಮೊಲಗಳು ಹಾಗೇ ಇರುತ್ತೇವೆಂದು ಕೊಳ್ಳುವುದು ಸ್ವಲ್ಪ ಅವನ ತಪ್ಪಾದರೂ, ಅವನಿಗೆ ದೊರಕಿದ ಮೊಲಕ್ಕೆ ಮೂರು ಕಾಲು ಇರುವುದರಿಂದ ಅವನು ಹೇಳಿರುವುದು ಸ್ವಲ್ಪ ಸತ್ಯವೆಂದೇ ಹೇಳಬಹುದು. ಹಾಗೇ ಮತ ಬದಲಾದವನ ವಿಷಯಕ್ಕೆ ಬಂದು ನೋಡಿದರೆ ಮತ ಬದಲಾದವನದು ತಪ್ಪಾದರೂ, ಆತನದು ಪೂರ್ತಿ ತಪ್ಪೆನ್ನುವುದಕ್ಕೆ ಸಾಧ್ಯವಿಲ್ಲ. ಆತನದು ಸ್ವಲ್ಪ ತಪ್ಪಾದರೆ ಮತ ಬದಲಾಗುವ ಹಾಗೆ ಮಾಡಿದ ಅಥವಾ ಬೋಧಿಸಿದವನದು ಕೂಡ ಸ್ವಲ್ಪ ತಪ್ಪಾಗುತ್ತದೆ. ದೇವರ ದೃಷ್ಠಿಯಲ್ಲಿ ಮತ ಬದಲಾಗುವುದು ಪಾಪವಾದರೇ ಆ ಪಾಪ ಮತ ಬದಲಾದವನಿಗೆ ಅರ್ಧ, ಮತವನ್ನು ಬದಲಾಗುವಂತೆ ಪ್ರಚಾರ ಮಾಡಿದವನಿಗೆ ಅರ್ಧ ಸೇರುತ್ತಿದೆ. ಒಬ್ಬ ಮತ ಪ್ರಚಾರಕನು ಒಬ್ಬನನ್ನು ಮತ ಬದಲಾಗುವ ಹಾಗೆ ಮಾಡಿದರೆ ರೂಪಾಯಿನಲ್ಲಿ ಅರ್ಧ ರೂಪಾಯಿ ಭಾಗ ಪಾಪ ಬದಲಾದವನಿಗೆ, ಅರ್ಧ ರೂಪಾಯಿ ಭಾಗ ಪಾಪ ಬದಲಾಯಿಸಿದವನಿಗು ಸೇರುತ್ತದೆ. ಮತಮಾರ್ಪಾಟು ಪಾಪ ಕಾರ್ಯದಲ್ಲಿ ಬದಲಾದವನು, ಬದಲಾಯಿಸಿದವನು ಇಬ್ಬರೂ ಭಾಗಸ್ವಾಮಿಗಳೇ. ಆದ್ದರಿಂದ ಇಬ್ಬರಿಗೂ ಸಮಾನವಾಗಿ ಪಾಪ ಸೇರುತ್ತಿದೆ. ಆ ಲೆಕ್ಕದ ಪ್ರಕಾರ ಒಂದು ಮತ ಪ್ರಚಾರಕನು ಎಷ್ಟೋ ಶ್ರಮಪಟ್ಟು ಕೆಲವು ಪ್ರಯತ್ನಗಳನ್ನು ಮಾಡಿ, ನಾಲ್ಕುನೂರು ಜನರನ್ನು ಹತ್ತು ಸಂವತ್ಸರಗಳಲ್ಲಿ ಅವರ ಮತವನ್ನು ಬಿಟ್ಟು ತನ್ನ ಮತದೊಳಗೆ ಬರುವಹಾಗೆ ಮಾಡಿದ್ದಾನೆಂದುಕೊಳ್ಳಿ. ಆಗ ಆತನು ನಾಲ್ಕು ನೂರು ಜನ ಪಾಪದಲ್ಲಿ ಭಾಗಸ್ವಾಮಿ ಆಗಬೇಕಾಗಿ ಬರುತ್ತದೆ. ಮತ ಬದಲಾದವನಿಗೆ ಅರ್ಧ ರೂಪಾಯಿ ಪಾಪವಾದರೆ, ಬದಲಾಯಿಸಿದ ಮತ ಪ್ರಚಾರಕನಿಗೆ ನಾಲ್ಕು ನೂರು ಜನರಿಗಾಗುವಷ್ಟು ಎರಡು ನೂರು ರೂಪಾಯಿಗಳಷ್ಟು ಪಾಪ ಕೈಗೂಡಿದೆಯೆಂದು ತಿಳಿಯುತ್ತಿದೆ. ಇದರ ಪ್ರಕಾರ ಮತ ಬದಲಾದವನದು ಕಡಿಮೆ ಪಾಪ ಕೇವಲ ಅರ್ಧ

ರೂಪಾಯಷ್ಟಾದಾಗ, ಮತವನ್ನು ಬದಲಾಗುವ ಹಾಗೆ ಮಾಡಿದವನಿಗೆ ಬಹಳ ಎಂದರೆ ಎರಡು ನೂರರಷ್ಟು ಪಾಪ ಬರುತ್ತಿದೆ. ಈ ಲೆಕ್ಕದಲ್ಲಿ ಮತವನ್ನು ಪ್ರಚಾರ ಮಾಡುವ ಮತ ಪ್ರಚಾರಕರಿಗೇ ಲೆಕ್ಕವಿಲ್ಲದಷ್ಟು ಪಾಪ ಬರುತ್ತಿದೆ.

ಇಲ್ಲಿ ಕೆಲವರು ಮತ ಪ್ರಚಾರಕರು ತಾವು ಮಾಡುತ್ತಿರುವುದು ಮತ ಪ್ರಚಾರವಾದರೂ, ಅದು ದೇವರ ಸೇವೆಯಾಗಿ ಲೆಕ್ಕಿಸಿ ಮಾಡುತ್ತಿದ್ದೇವಾದ್ದರಿಂದ ನಾವು ಮಾಡಿದ ಕೆಲಸಕ್ಕೆ ಪಾಪ ಏಕೆ ಬರುತ್ತದೆ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ದೇವರು ತನ್ನ ಜ್ಞಾನವನ್ನು ಪ್ರಚಾರ ಮಾಡುವುದು ಸೇವೆ ಎಂದಿದ್ದಾನಾಗಲೀ, ಮತವನ್ನು ಪ್ರಚಾರ ಮಾಡುವುದು ಸೇವೆ ಎಂದು ಎಲ್ಲೂ ಹೇಳಲಿಲ್ಲ. ದೇವರು ತನ್ನ ಬೋಧನೆಯಲ್ಲಿ ಎಲ್ಲಿಯೂ ಮತ ಎನ್ನುವ ಪ್ರಸ್ತಾಪವೇ ತಿಳಿಸದಿರುವಾಗ ಮನುಷ್ಯರು ದೇವರಿಗೆ ಒಂದು ಮತವನ್ನು ಅಂಟಿಸುವುದೇ ಪಾಪ. ಅಷ್ಟೇ ಅಲ್ಲದೆ ಇದು ಇಂತಹ ದೇವರ ಮತವೆಂದು ಹೇಳುವುದು ಇನ್ನೂ ದೊಡ್ಡ ಪಾಪವಾಗುತ್ತದೆ. ಆದರೇ ಈ ದಿನ ಕ್ರೈಸ್ತ ಬೋಧಕರು ಮತವನ್ನು ಬೆಳಸುವುದಕ್ಕೇ ಪ್ರಯತ್ನಿಸುತ್ತಿದ್ದಾರೆ ಹೊರತು, ದೇವರ ಜ್ಞಾನವನ್ನು ಪ್ರಕಟಿಸುವುದಕ್ಕಲ್ಲ ಎಂದು ತಿಳಿದುಹೋಗುತ್ತಿದೆ. ಪ್ರತಿ ಬೋಧಕನೂ ಯೇಸು ಹೇಳಿದ ಜ್ಞಾನವನ್ನು ಹೇಳಿದ ನಂತರ "ಯೇಸನ್ನು ವಿಶ್ವಾಸಿಸಿದವರಿಗೇ ಈ ಬೋಧನೆಗಳು" ಎಂದು ಹೇಳುವುದು ನಡೆಯುತ್ತಿದೆ. ಈ ಬೋಧನೆಗಳು ಕೇಳಿದವರು ಯೇಸನ್ನು ವಿಶ್ವಾಸಿಸಿ ತಮ್ಮ ದೇವರಾಗಿ ಒಪ್ಪಿಕೊಳ್ಳಬೇಕೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದರಿಂದ ಪ್ರತ್ಯಕ್ಷವಾಗಿ ಅಲ್ಲದಿದ್ದರೂ, ಪರೋಕ್ಷವಾಗಿಯಾದರೂ ನಿಮ್ಮ ಮತವನ್ನು ಬಿಟ್ಟು ನಮ್ಮ ಮತದೊಳಗೆ ಬರಬೇಕೆಂದು ಹೇಳುವುದೇ ಅಲ್ಲಿ ಕಾಣಿಸುತ್ತಿದೆ. ಕ್ರೈಸ್ತ ಬೋಧಕರೆಲ್ಲರೂ ಅಲ್ಪ ಸ್ವಲ್ಪ, ತಮಗೆ ತಿಳಿದೊ ತಿಳಿಯದೋ ಮತವನ್ನು ಕುರಿತೇ ಪ್ರಚಾರ ಮಾಡುತ್ತಿದ್ದಾರೆ. ಇಲ್ಲಿಯವರೆಗೂ ಮತ ಪ್ರಚಾರ ಮತಮಾರ್ಪಾಟು ಪಾಪವೆಂದು ಹೇಳಿದ್ದೇನಾಗಲೀ, ಹೇಗೆ ಪಾಪವೊ ಹೇಳಲಿಲ್ಲ. ಅದರ ವಿಷಯ ನಂತರ ಹೇಳುತ್ತೇನೆ. ಈಗ ಮುಸ್ಲೀಮ್ ಮತಸ್ಥರಲ್ಲಿ ಮತ

ಪ್ರಚಾರ ಇದೆಯಾ ಇಲ್ಲವಾ ಎಂದು ನನಗೆ ಉಂಟಾದ ಅನುಭವಗಳನ್ನನುಸರಿಸಿ ವಿವರಿಸಿಕೊಳ್ಳೋಣ.

ಸೃಷ್ಠಿ ಆದಿಯಲ್ಲಿ ದೇವರು ಮನುಷ್ಯರಿಗೆ ತನ್ನ ಜ್ಞಾನವನ್ನು ವಾಣಿಯಿಂದ (ವಹೀ ಮೂಲಕ) ತಿಳಿಸಿದ್ದಾನೆ. ಸೃಷ್ಠಿ ಆದಿಯಲ್ಲಿ ಮೊದಲು ದೇವರ ಜ್ಞಾನವನ್ನು ತಿಳಿದುಕೊಂಡಿರುವುದು ಸೂರ್ಯ ಗ್ರಹ, ನಂತರ ಜಿಬ್ರಯೇಲ್ ಗ್ರಹ. ಮೊದಲು ತಾನು ತಿಳಿದುಕೊಂಡ ಜ್ಞಾನವನ್ನು ಸೂರ್ಯನು ಮನುವು ಎಂಬ ವ್ಯಕ್ತಿಗೆ ಭೂಮಂಡಲದ ಮೇಲೆ ತಿಳಿಸಿದ್ದಾನೆ. ಮನುವು ಇಕ್ಷ್ವಾಕನೆನ್ನುವ ಸೂರ್ಯವಂಶ ರಾಜನಿಗೆ ತಿಳಿಸಿರುವಾಗ, ಆತನು ದೇಶದಲ್ಲಿನ ಪ್ರಜೆಗಳೆಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾನೆ. ಆ ವಿಧವಾಗಿ ಮೊದಲು ಎಲ್ಲರಿಗೂ ತಿಳಿದ ಜ್ಞಾನ ದ್ವಾಪರಯುಗದ ಕೊನೆಯಲ್ಲಿ ತಿಳಿಯದಂತಾಗಿ ಅಜ್ಞಾನ ಬೆಳೆದುಹೋಗಿದೆ. ಆಗ ಕೃಷ್ಣನಾಗಿ ಬಂದ ಭಗವಂತನು ಆದಿಯಲ್ಲಿ ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಹೇಳಿರುವಾಗ ಅದೇ ಈದಿನ ಭಗವದ್ಗೀತೆಯಾಗಿ ನಮ್ಮ ಮುಂದೆ ಇದೆ. ನಂತರ ಕಲಿಯುಗದಲ್ಲಿ ಯೇಸು ಹೇಳಿದ ಜ್ಞಾನ ಬೈಬಲ್‌ಆಗಿ ಇದೆ. ಬೈಬಲ್ ಹೇಳಿದ ನಂತರ ಆರು ನೂರು ವರ್ಷಗಳಿಗೆ ಜಿಬ್ರಯೇಲ್ ಗ್ರಹ ಮುಹಮ್ಮದ್ ಪ್ರವಕ್ತರಿಗೆ ಹೇಳಿದ ಜ್ಞಾನ ಖುರ್‌ಆನ್ ರೂಪವಾಗಿ ಈ ದಿನ ನಮ್ಮ ಮುಂದೆ ಇದೆ. ಪ್ರಸ್ತುತ ಕಾಲದಲ್ಲಿ ದೈವಗ್ರಂಥಗಳಾಗಿ ಭಗವದ್ಗೀತೆ, ಬೈಬಲ್, ಖುರ್‌ಆನ್ ಎನ್ನುವ ಮೂರು ಗ್ರಂಥಗಳು ಹೆಸರುವಾಸಿಯಾಗಿವೆ. ಮೂರು ಗ್ರಂಥಗಳು ಮನುಷ್ಯರಿಗೆ ಜ್ಞಾನವನ್ನು ಬೋಧಿಸಿವೆಯಾಗಲೀ ಮತವನ್ನು ಬೋಧಿಸಲಿಲ್ಲ. ಆ ಗ್ರಂಥಗಳಲ್ಲಿ ಮತ ಎನ್ನುವ ಪ್ರಸ್ತಾಪವೇ ಇಲ್ಲ. ಇದಕ್ಕೆ ಚಿಕ್ಕ ಉದಾಹರಣೆಯನ್ನು ಖುರ್‌ಆನ್ ಗ್ರಂಥದಿಂದ ನೋಡೋಣ. ಖುರ್‌ಆನ್‌ನಲ್ಲಿ 81ನೇ ಸುರಾ 27ನೇ ಆಯತ್‌ನಲ್ಲಿ ಹೀಗೆ ಇದೆ. **“ಇದು (ಈ ಖುರ್‌ಆನ್) ಸಮಸ್ತ ಲೋಕ ವಾಸರಿಗೋಸ್ಕರ ಹಿತೋಪದೇಶ.”** ಇಲ್ಲಿ ಖುರ್‌ಆನ್ ಗ್ರಂಥದಲ್ಲಿ ಹೇಳಿದಹಾಗೆ ದೇವರು ಹೇಳಿದ ಯಾವ ಗ್ರಂಥವಾಗಲೀ, ದೇವರ ಜ್ಞಾನವಿರುವ ಯಾವ ಗ್ರಂಥವಾಗಲೀ, ಸಮಸ್ತ ಪ್ರಜೆಗಳಿಗೂ ಹೇಳಿದ ಹಿತೋಪದೇಶವಾಗಿ ಇವೆಯಾಗಲೀ, ಮತೋಪದೇಶವಾಗಿ

ಯಾವುದೂ ಇಲ್ಲ. ಮತ ಎನ್ನುವುದು ಮನುಷ್ಯನಲ್ಲಿನ ಇಷ್ಟವೇಯಾಗಲೀ, ದೇವರಲ್ಲಿನ ಉದ್ದೇಶವಲ್ಲ. ದೇವರ ಉದ್ದೇಶವೆಲ್ಲವೂ, ಮನುಷ್ಯನಿಗೆ ತನ್ನ ಜ್ಞಾನವನ್ನು ತಿಳಿಸುವುದೇ ಹೊರತು ಬೇರೆ ಯಾವುದೂ ಇಲ್ಲ. ದೇವರು ಒಂದು ಕುಲಕ್ಕಾಗಲೀ, ಒಂದು ಜಾತಿಗಾಗಲೀ, ಒಂದು ವರ್ಗಕ್ಕಾಗಲೀ ಸೇರಿದವನಲ್ಲ. ದೇವರು ಒಬ್ಬನೇ ಇದ್ದಾನೆ. ಆತನು ಎಲ್ಲರಿಗೂ ಸಮಾನನು. ಆದ್ದರಿಂದ ಆತನಿಗೆ ಕುಲಗಳು, ಮತಗಳು ಇರುವುದಿಲ್ಲ. ಆದ್ದರಿಂದ ತನ್ನ ಜ್ಞಾನ ಗ್ರಂಥವಾದ ಖುರ್‌ಆನ್‌ನಲ್ಲಿ 81ನೇ ಸೂರಾ, 27ನೇ ಆಯತ್‌ನಲ್ಲಿ ತನ್ನ ಗ್ರಂಥ ಯಾವುದಾದರೂ ಸಮಸ್ತ ಲೋಕವಾಸರಿಗೂ ಹಿತೋಪದೇಶ ಎಂದಿದ್ದಾನೆ. ಆದರೇ ಮೂರು ಮತ ಗ್ರಂಥಗಳಾಗಿ ಎಲ್ಲರೂ ಹೇಳುತ್ತಿದ್ದರೂ, ನಾನು ಮಾತ್ರ ಮೂರು ಗ್ರಂಥಗಳು ಮತ ಗ್ರಂಥಗಳಲ್ಲ, ಅವು ಮೂರೂ ದೈವಜ್ಞಾನ ಗ್ರಂಥಗಳೆಂದು ಹೇಳುತ್ತಿದ್ದೇನೆ.

ಮೂರು ಗ್ರಂಥಗಳಲ್ಲಿ ಇರುವುದು ಒಂದೇ ದೇವರ ಸಾರಾಂಶ ಎಂದು, ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನವೇ ಮೂರು ಗ್ರಂಥಗಳಲ್ಲಿ ಇದೆಯೆಂದು, ನನಗೆ ತಿಳಿದಿರುವುದರಿಂದ ನಾನು ಮೂರಕ್ಕೂ ಸಮಾನ ಗೌರವ ಕೊಡುತ್ತಿದ್ದೇನೆ. ಉಳಿದವರು ಮೂರು ದೈವ ಗ್ರಂಥಗಳನ್ನು ಮತ ಗ್ರಂಥಗಳಾಗಿ ಹೇಳಿಕೊಳ್ಳುವುದು ನಮಗೆ ಸ್ವಲ್ಪವಾದರೂ ಇಷ್ಟವಾಗುವುದಿಲ್ಲ. ಹಾಗಿರುವಾಗ ಮತ ಎನ್ನುವ ವಿಷಯವೂ ಸಹ ನನಗೆ ಇಷ್ಟವಾಗುವುದಿಲ್ಲ. ದೇವರ ದೃಷ್ಠಿಯಲ್ಲಿ ಎಲ್ಲ ಮತದವರೂ ಸಮಾನವೇಯೆಂದು, ಇದು ನನ್ನ ಮತ ಎನ್ನುವ ಮತಸ್ಥರ ದೃಷ್ಠಿಯಲ್ಲಿ, ದೇವರು ಅವರ ಮತದ ಪ್ರಕಾರ ಅವರಿಗೆ ದೇವರು ಬೇರೆಬೇರೆಯಾಗಿ ಕಾಣಿಸಿದರೂ, ದೇವರ ದೃಷ್ಠಿಯಲ್ಲಿ ದೇವರಿಗೆ ಮನುಷ್ಯರೆಲ್ಲರೂ ಸಮಾನವೇ. ಆ ವಿಷಯ ತಿಳಿಯದವರು ನಮ್ಮ ಮತ ದೊಡ್ಡದೆಂದು ಕೆಲವರು ಹೇಳುತ್ತಿರುವಾಗ, ಅಲ್ಲ ನಮ್ಮ ಮತ ದೊಡ್ಡದೆಂದು ಮತ್ತೆ ಕೆಲವರು ಪ್ರಚಾರ ಮಾಡುತ್ತಿದ್ದಾರೆ. ಅಲ್ಲಿಗೆ ನಿಲ್ಲದೆ ಅವರವರ ಮತಗಳನ್ನು ಅವರವರು ಪ್ರಚಾರ ಮಾಡುತ್ತಾ, ಅದರಿಂದ ಮತವನ್ನು ವ್ಯಾಪ್ತಿ ಮಾಡಬೇಕೆಂದು ಪ್ರಯತ್ನಿಸುತ್ತಿದ್ದಾರೆ.

ಮತವ್ಯಾಪ್ತಿಗೋಸ್ಕರ ಕ್ರೈಸ್ತರು ಹೇಗೆ ಮಾಡುತ್ತಿರುವುದು ಸ್ವಲ್ಪದವರೆಗು ತಿಳಿದುಕೊಂಡಿದ್ದೇವೆ. ಇನ್ನು ಉಳಿದ ಇಸ್ಲಾಮ್, ಹಿಂದೂಮತಗಳವರಲ್ಲಿ ಈ ಮಧ್ಯೆ ಕಾಲದಲ್ಲಿ ಕ್ರೈಸ್ತರನ್ನು ನೋಡಿ ಅವರ ಹಾಗೇ ತಾವೂ ಸಹ ತಮ್ಮ ಮತವನ್ನು ವ್ಯಾಪ್ತಿ ಮಾಡಬೇಕೆಂದು, ಇತರರನ್ನು ತಮ್ಮ ಮತದಲ್ಲಿ ಸೇರಿಸಿಕೊಳ್ಳಬೇಕೆಂದು ಮುಸ್ಲಿಮರು ಅಂದುಕೊಂಡು ಮತವ್ಯಾಪ್ತಿಗೋಸ್ಕರ ಅವರಿಗೆ ತೋಚಿದ ಮಾರ್ಗವನ್ನು ಅವರು ಅವಲಂಭಿಸುತ್ತಿದ್ದಾರೆ. ಇನ್ನೂ ಹಿಂದೂಗಳು ಮಾತ್ರ ಮತವ್ಯಾಪ್ತಿ ಮಾಡಬೇಕೆಂದು ಅಂದುಕೊಳ್ಳಲಿಲ್ಲ ಆದರೆ, ದಿನ ದಿನ ಕ್ಷೀಣಿಸಿ ಹೋಗುತ್ತಿರುವ ತಮ್ಮ ಮತವನ್ನು ನೋಡಿ ಬಾಧೆಬೀಳುತ್ತಾ, ಇರುವ ಮತವನ್ನು ರಕ್ಷಿಸಿಕೊಳ್ಳುವ ಕಾರ್ಯದಲ್ಲಿ ನಿಮಗ್ನರಾಗಿ, ಹಿಂದೂರಕ್ಷಣೆ, ಹಿಂದೂಧರ್ಮ ಸಂರಕ್ಷಣೆ ಎನ್ನುವ ಹೆಸರುಗಳಿಂದ ಸಂಘಗಳನ್ನು ಏರ್ಪಡಿಸಿಕೊಂಡು ಅವರ ಮತವನ್ನು ಅವರು ಕಾಪಾಡಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಾರೆ.

ಹಿಂದೂಗಳು ಇತರ ಮತಸ್ಥರನ್ನು ತಮ್ಮ ಮತದಲ್ಲಿ ಸೇರಿಸಿಕೊಳ್ಳಬೇಕೆಂದು ಅಂದುಕೊಳ್ಳುತ್ತಿಲ್ಲ. ಆದರೆ, ಹಿಂದೂ ಮತದಿಂದ ಇತರ ಮತಗಳೊಳಗೆ ಹೋಗುವ ಹಿಂದೂಗಳನ್ನು ಹೇಗೆ ನಿವಾರಿಸಬೇಕೆನ್ನುವ ಆಲೋಚನೆಯಲ್ಲಿ ಮುಳುಗಿಹೋಗಿ, ಅದಕ್ಕೋಸ್ಕರ ಹಿಂದೂಮತದಲ್ಲಿ ಎಷ್ಟೋ ಸಂಘಗಳನ್ನು ಏರ್ಪಡಿಸಿಕೊಂಡಿದ್ದಾರೆ. ಹಿಂದೂಗಳು ತಮ್ಮ ಮತವನ್ನು ಬಿಟ್ಟು ಇತರ ಮತಗಳೊಳಗೆ ಹೋಗಬಾರದೆನ್ನುವ ಪ್ರಯತ್ನ ಮಾಡುತ್ತಲೇ ಇದ್ದಾರೆ. ಆದರೂ ಯಥಾವಿಧಿಯಾಗಿ ಮತಮಾರ್ಪಾಟು ನಡೆದುಹೋಗುತ್ತಿದೆ. ಹಿಂದೂಗಳು ಎಷ್ಟು ಪ್ರಯತ್ನಿಸಿದರೂ ಮತಮಾರ್ಪಾಟಿಗೆ ಅಣೆಕಟ್ಟು ಹಾಕಲಾರದೆ ಹೋಗುತ್ತಿದ್ದಾರೆ. ಪ್ರತಿ ದಿನ ಹಿಂದೂಗಳು ಇತರ ಮತದೊಳಗೆ ಹೋಗುವುದು ನಡೆಯುತ್ತಿದೆ. ಇಲ್ಲಿ ಒಂದು ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಪೂರ್ವದಿಂದ ಯಾವಾಗಲೂ ತುಂಬಿಕೊಂಡಿರುವ ಕೆರೆಗಳಲ್ಲಿ ನೀರು ಕಡಿಮೆ ಆಗುವುದನ್ನು ಗಮನಿಸಿದವರು (ಗ್ರಾಮಸ್ಥರು) ಕೆರೆಯಲ್ಲಿನ ನೀರನ್ನು ರಕ್ಷಿಸುವುದಕ್ಕೆ

ಕಂಕಣ ಕಟ್ಟಿಕೊಂಡು "ಕಾಸಾರ ಸಂರಕ್ಷಣೆ ಸಂಘ" ಎನ್ನುವ ಹೆಸರಿಂದ ಒಂದು ಗುಂಪನ್ನು ತಯಾರು ಮಾಡಿಕೊಂಡು, ಕೆರೆಗೆ ಒಂದೇ ಕಡೆ ಕಟ್ಟೆ ಇದ್ದರೆ ಚೆನ್ನಾಗಿರುವುದಿಲ್ಲವೆಂದು ತಿಳಿದು ಶ್ರಮಪಟ್ಟು ಕೆರೆಯ ಸುತ್ತಾ ಕಟ್ಟೆ ಕಟ್ಟಿದ್ದಾರೆ. ಆದರೂ ಕರೆಯಲ್ಲಿನ ನೀರು ಕ್ರಮೇಣ ಕಡಿಮೆಯಾಗುತ್ತಾ ಹೋಗುವುದನ್ನು ನೋಡಿ ಕೆರೆಯಲ್ಲಿನ ನೀರು ಹೇಗೆ ಹೋಗುತ್ತಿರುವುದು ತಿಳಿಯದೆ, ಕೆರೆ ಪರಿಸರಪ್ರಾಂತದಲ್ಲಿ ಯಾರಾದರೂ ಕಾಣಿಸಿದರೆ ಅವರು ನೀರನ್ನು ಕಳ್ಳತನ ಮಾಡುತ್ತಿದ್ದಾರೆಂದು, ಅವರ ಮೇಲೆ ದಾಳಿಮಾಡಿ ಹೊಡೆದು ಕಳುಹಿಸುತ್ತಿದ್ದರು. ಸ್ವಲ್ಪ ಕಾಲಕ್ಕೆ ಆ ಊರಿನವರು ಕೆರೆ ಹತ್ತಿರಕ್ಕೆ ಹೋದವರೆಲ್ಲರನ್ನೂ ಹೊಡೆಯುತ್ತಿದ್ದಾರೆನ್ನುವ ಕೆಟ್ಟ ಹೆಸರು ಬಂದಿದೆಯಾಗಲೀ, ನೀರು ಮಾತ್ರ ನಿಲ್ಲದಂತೆ ಕಡಿಮೆ ಆಗುತ್ತಲೇ ಇತ್ತು. ಯಾರಾದರೂ ಬಾಯಾರಿಕೆಯಿಂದ ಕೆರೆಯಲ್ಲಿನ ನೀರು ಕುಡಿದು ತಮ್ಮ ದಾಹವನ್ನು ತೀರಿಸಿಕೊಳ್ಳಬೇಕೆಂದುಕೊಂಡವರು ನೀರು ಕುಡಿಯುವುದು ಬಿಟ್ಟು ಒದೆಗಳು ಮಾತ್ರ ತಿಂದು ಬರುತ್ತಿದ್ದರು. ದಾಹಕ್ಕೆ ಎಷ್ಟು ಜನ ನೀರು ಕುಡಿದರೂ ಕೆರೆ ಮಟ್ಟ ಇಳಿಯುವುದಿಲ್ಲವೆಂದು, ಕೆರೆಯಲ್ಲಿನ ನೀರಿನ ಮಟ್ಟ ಕಡಿಮೆ ಆಗುವುದಕ್ಕೆ ಬೇರೆ ಕಾರಣವಿದೆಯೆಂದು ಆಲೋಚಿಸದವರು, ಭೂಮಿಯಲ್ಲಿಯೇ ಕೆರೆ ಮಧ್ಯದಲ್ಲಿ ಚಿಕ್ಕ ರಂಧ್ರ ಬಿದ್ದು ಅಲ್ಲಿಂದ ಕಿಲೋಮೀಟರ್ ದೂರದಲ್ಲಿರುವ ತಗ್ಗು ಪ್ರಾಂತದೊಳಕ್ಕೆ ನೀರು ಸ್ವಲ್ಪ ಸ್ವಲ್ಪವಾಗಿ ಸೇರಿ, ಅಲ್ಲಿ ನೆಲ ವದ್ದೆಯಾಗಿ ಬದಲಾಗುವುದನ್ನು ಯಾರೂ ಗಮನಿಸಲಿಲ್ಲ. ಕೆರೆ ಮಧ್ಯದಲ್ಲಿಂದ ಭೂಮಿಯಲ್ಲಿನ ಚಿಕ್ಕ ರಂಧ್ರದಿಂದ ಕಿಲೋಮೀಟರ್ ದೂರದಲ್ಲಿರುವ ಪ್ರಾಂತದೊಳಗೆ ನೀರು ಹೋಗುತ್ತಿದೆಯೆಂದು ತಿಳಿದು, ಭೂಮಿಯಲ್ಲಿನ ರಂಧ್ರವನ್ನು ಹೂತಿಟ್ಟರೆ ಅಥವಾ ಅಣಗಿಸಿದರೆ ನೀರು ಕೆರೆಯಿಂದ ಹೋಗದಂತೆ ನಿಂತುಹೋಗುತ್ತದೆಂದು ತಿಳಿದು, ಹಾಗೆ ಮಾಡುವುದಾದರೆ ಕೆರೆಯಲ್ಲಿನ ನೀರನ್ನು ರಕ್ಷಿಸಿದಂತಾಗುತ್ತದೆ. ಹಾಗಲ್ಲದೆ ಅಸಲಾದ ಕಾರಣವನ್ನು ತಿಳಿಯದಂತೆ, ನೀರು ಕುಡಿಯುವುದಕ್ಕೆ ಬಂದಿರುವವರೆಲ್ಲರನ್ನು ಹೊಡೆದು ಕಳುಹಿಸಿದರೆ, ಅದೇ ನೀರಿನ ರಕ್ಷಣೆ ಎಂದುಕೊಂಡರೇ, ಅದರಿಂದ ಕೆಟ್ಟ ಹೆಸರೇ ಹೊರತು ಒಳ್ಳೆಯ ಹೆಸರು ಬರುವುದಿಲ್ಲ.

ಆದರೇ ಈ ದಿನ ಹಿಂದೂ ಧರ್ಮರಕ್ಷಕರೆಲ್ಲರೂ ಕೆರೆ ಸಂರಕ್ಷಣೆ ಸಂಘದವರು ನೀರನ್ನು ಕುಡಿಯುವುದಕ್ಕೆ ಬಂದವರನ್ನು ಹೊಡೆದಹಾಗೆ, ಪರಮತ ಎನ್ನುವ ಹೆಸರು ಕೇಳಿಸಿದ ಕಡೆಯೆಲ್ಲಾ ಹೊಡೆಯುವುದಕ್ಕೆ ಮುಂದಾಗುತ್ತಿದ್ದಾರೆ. ಆದರೆ, ಹಿಂದೂಮತ ಕ್ಷೀಣಿಸಿಹೋಗುವುದಕ್ಕೆ ಅಸಲಾದ ಕಾರಣವೇನೆಂದು ಅದರ ಮೇಲೆ ದೃಷ್ಠಿ ಹರಿಸದೆ ಹೋಗಿದ್ದಾರೆ. ಕೆರೆಯಲ್ಲಿನ ನೀರು ಹೇಗೆ ಸೋರಿಹೋಗುತ್ತಿವೆಯೋ ತಿಳಿಯದೆ ಮನುಷ್ಯರು ದಾಹಕ್ಕೋಸ್ಕರ ಕುಡಿದರೆ ಕಡಿಮೆಯಾಗುತ್ತವೆಂದುಕೊಳ್ಳುವುದು ಪೂರ್ತಿ ತಪ್ಪಲ್ಲವೆ! ಅದೇ ವಿಧವಾದ ತಪ್ಪುಗಳು ಹಿಂದೂಗಳು ಮಾಡುವುದಕ್ಕೆ, ಹಿಂದೂ ಧರ್ಮಗಳಾವುವೂ ಹಿಂದೂ ಮತ ರಕ್ಷಕರೆನ್ನುವ ಅವರಿಗೆ ಪೂರ್ತಿ ತಿಳಿಯದಂತೆ ಹೋಗುವುದೇ ಕಾರಣವೆನ್ನಬಹುದು. ಹಿಂದೂಮತ ಕ್ಷೀಣಿಸುವುದಕ್ಕೆ ದೊಡ್ಡ ಕಾರಣ ಹಿಂದೂಗಳಿಗೇ ಹಿಂದೂ ಧರ್ಮಗಳು ತಿಳಿಯದಂತೆ ಹೋಗುವುದೂ, ಹಿಂದುಗಳನ್ನು ಹಿಂದುಗಳೇ ಗುರುತಿಸದಂತೆ ಹೋಗುವುದು ಹಿಂದೂಗಳೆಲ್ಲರಿಗೂ ವಿಚಕ್ಷಣ ಇಲ್ಲದಂತೆ ಹೋಗುವುದೂ, ಒಬ್ಬನು ತಿಳಿದವನೆಂದು ಅವನು ಏನು ಹೇಳಿದರೆ ಅದು ಮಾಡುವುದೂ, ತನ್ನ ಮತದವರನ್ನು ಸಹ ಪರಮತದವರನ್ನಾಗಿ ಲೆಕ್ಕಿಸುವುದೂ ಪೂರ್ವದಿಂದ ನಡೆಯುತ್ತಿರುವ ಲೋಪಗಳೇ. ಆದ್ದರಿಂದ ಅದ್ವೈತರು ಹೇಳಿದರೇ ವಿಶಿಷ್ಟಾದ್ವೈತರನ್ನು ಹಿಂಸಿಸಿದ್ದಾರೆ. ಹಿಂದೂಮತದಲ್ಲಿನ ಅದ್ವೈತರು ಹಿಂದೂ ಮತವೇ ಆದ ಬೌದ್ಧರನ್ನು ನಮ್ಮ ಮತವಲ್ಲ ಎಂದು ಹೊರ ಹಾಕಿದ್ದಾರೆ. ಹೀಗೆ ಹಿಂದೂಗಳೇ ಹಿಂದೂತ್ವವನ್ನು ಬಲಹೀನ ಪಡಿಸುತ್ತಾ ಬರುತ್ತಿದ್ದಾರೆ. ಹಿಂದೂಮತದಲ್ಲಿ ಭಾಗವಾದ ತ್ರೈತ ಸಿದ್ಧಾಂತವನ್ನು ಪರ ಮತ ಎನ್ನುತ್ತಿದ್ದಾರೆ. ಸ್ವತಃವಾಗಿ ತ್ರೈತ ಸಿದ್ಧಾಂತವನ್ನು ಬೋಧಿಸುವ ನಮ್ಮನ್ನು ಸಹ ಕ್ರೈಸ್ತರ ಕೆಳಗೆ ಜಮಕಟ್ಟಿ ಈ ದಿನ ಹಿಂದೂ ಮತದಲ್ಲಿನ ಅದ್ವೈತರು ಮಾತನಾಡುತ್ತಿದ್ದಾರೆ. ಈ ವಿಧವಾಗಿ ಹಿಂದೂಮತದಲ್ಲಿನ ಒಂದು ಸಿದ್ಧಾಂತದವರು (ಅದ್ವೈತ ಸಿದ್ಧಾಂತದವರು) ಸಂಪೂರ್ಣ ಹಿಂದೂ ಧರ್ಮಗಳು ಇರುವ ತ್ರೈತ ಸಿದ್ಧಾಂತವನ್ನು ಪರಮತವೆಂದರೆ, ಆಲೋಚನೆಯಾಗಲೀ,

ವಿಚಕ್ಷಣೆಯಾಗಲೀ ಇಲ್ಲದ ಹಿಂದೂಗಳು ಕೆಲವರು ಹಿಂದೂಮತವಾದ ನಮ್ಮ ಮೇಲೆ ಸಹ ದಾಳಿಗೆ ಇಳಿಯುತ್ತಿದ್ದಾರೆ. ಇದಕ್ಕೆಲ್ಲಾ ಕಾರಣ ಹಿಂದೂ ಎನ್ನುವವನಿಗೆ ಹಿಂದೂ ಧರ್ಮಗಳಾವುವೊ ತಿಳಿಯದಂತೆ ಹೋಗುವುದರಿಂದ ಯಾವುದು ತನ್ನ ಮತವೊ ಸಹ ಗುರುತಿಸದಂತೆ ತನ್ನ ಮತವನ್ನು ಸಹ ಪರಮತ ಎನ್ನುವ ಸ್ಥಿತಿಗೆ ಹಿಂದೂಗಳು ಬಂದಿದ್ದಾರೆ. ಒಂದು ಕಡೆ ಹಿಂದೂಗಳು ಕ್ರೈಸ್ತ ಬೋಧನೆಗಳಿಗೆ, ಅವರು ತೋರಿಸುವ ಪ್ರಲೋಭಗಳಿಗೆ ಒಳಗಾಗಿ ಕ್ರೈಸ್ತರಾಗಿ ಬದಲಾಗುತ್ತಿರುವಾಗ, ಮತ್ತೊಂದುಕಡೆ ಹಿಂದೂಗಳು ಹಿಂದೂಗಳನ್ನೇ ಗುರುತಿಸದಂತೆ ಪರಮತ ಎಂದು ಬೌದ್ಧ ಮತದಂತಹವರನ್ನು ಹಿಂದೂಮತಕ್ಕೆ ದೂರ ಮಾಡುವುದೂ, ಹಿಂದೂಗಳಲ್ಲಿ ಸಿದ್ಧಾಂತ ಕರ್ತರಾದ ನಮ್ಮಂಥವರನ್ನು ಪರಮತ ಎನ್ನುವುದೂ, ತ್ರೈತ ಸಿದ್ಧಾಂತ ಭಗವದ್ಗೀತೆಯನ್ನೇ ಹಿಂದೂಗಳಿಗೆ ಸಂಬಂಧಿಸಿರುವುದಲ್ಲ ಎನ್ನುವುದು ಹಿಂದೂಮತ ಕ್ಷೀಣಿಸುವುದಕ್ಕೆ ಕಾರಣ ವಾಗುತ್ತಿದೆ.

ಹಿಂದೂಗಳಲ್ಲಿ ಸಂಕುಚಿತ ಸ್ವಭಾವಗಳು ಹೋಗದವರೆಗು, ಹಿಂದೂಗಳಾಗಿರುವವರಿಗೆ ಹಿಂದೂಧರ್ಮಗಳು ತಿಳಿಯದವರೆಗು, ಹಿಂದೂ ಮತ ರಕ್ಷಕರೆನ್ನುವವರು ತಮ್ಮ ಹಿಂದುಗಳನ್ನೇ ತಾವು ಗುರುತಿಸದಂತಿರುವವರೆಗು, ಅದ್ವೈತರ ದೊಡ್ಡಸ್ತಿಕೆಯಲ್ಲಿ ಹಿಂದೂಮತವಿದ್ದು ಅವರು ವಿಶಿಷ್ಟಾದ್ವೈತ, ದ್ವೈತ, ತ್ರೈತ ಸಿದ್ಧಾಂತಗಳವರ ಮೇಲೆ ದಾಳಿಗಳು ಮಾಡುವುದು ನಿಲ್ಲಿಸದಂತಿರುವವರೆಗು, ಹಿಂದೂ ಮತ ಇತರ ಮತಗಳ ಮುಂದೆ ಕ್ಷೀಣಿಸದೆ ತಪ್ಪುವುದಿಲ್ಲ. ಹಿಂದೂ ಮತದಲ್ಲಿ ಈ ಧೋರಣೆ ಇರುವವರೆಗು ಹಿಂದೂ ಮತ ಕ್ಷೀಣಿಸುತ್ತಲೇ ಇರುತ್ತದೆ. ಕೆಲವು ನೂರು ಸಂವತ್ಸರಗಳಿಂದ ಹಿಂದೂ ಮತ ಕ್ಷೀಣಿಸುತ್ತಾ ಬರುತ್ತಿದ್ದರೂ, ಇಂದಿಗೂ ತಮ್ಮ ಲೋಪಗಳನ್ನು ತಾವು ಗುರುತಿಸದೆ, ಹಿಂದೂಗಳಲ್ಲಿ ಕೆಲವರು ಮತ ರಕ್ಷಣೆ ಎನ್ನುವ ಹೆಸರಿಂದ ಹಿಂಸಾಮಾರ್ಗವನ್ನು ಅನುಸರಿಸುವುದೂ, ಅಂತಹ ಸಂಘಗಳನ್ನು ತಯಾರು ಮಾಡಿಕೊಳ್ಳುವುದೂ, ತಪ್ಪು ಭಾವನೆಗಳನ್ನು ತೋರಿಸಿ ಹಿಂದೂಗಳನ್ನೇ ಹಿಂದೂಗಳು ಹಿಂಸಿಸುವುದು ಸರಿಯಲ್ಲದ

ಕೆಲಸವೆಂದು ನಾವು ತಿಳಿಸುತ್ತಿದ್ದೇವೆ. ಇದೆಲ್ಲವೂ ನಮ್ಮ ಅನುಭವದಿಂದ ಹೇಳುವ ಮಾತುಗಳೇ ಎಂದು ತಿಳಿಯಬೇಕು. ಒಂದು ಕಡೆ ಕ್ರೈಸ್ತರು ವೇಗವಾಗಿ ತಮ್ಮ ಮತವನ್ನು ಬೆಳೆಸುತ್ತಾ ಹೋಗುತ್ತಿರುವಾಗ, ಮತ್ತೊಂದು ಕಡೆ ನಿದಾನವಾಗಿ ತಮ್ಮ ಕಡೆ ಸೆಳೆದುಕೊಳ್ಳುವುದಕ್ಕೆ ಮುಸ್ಲಿಮರು ಪ್ರಯತ್ನಿಸುತ್ತಿರುವಾಗ, ಈ ಕಡೆ ಕ್ರೈಸ್ತರಿಗು ಆ ಕಡೆ ಮುಸ್ಲಿಮರಿಗು ಎರಡು ಕಡೆಗೂ ಬದಲಾಗುವವರು ಹಿಂದೂಗಳೇ. ಈ ದಿನ ಮುಸ್ಲಿಮ್ ಕ್ರೈಸ್ತನಾಗಿ ಆಗಲಿ, ಕ್ರೈಸ್ತನು ಮುಸ್ಲಿಮ್ ಆಗಿ ಆಗಲಿ ಬದಲಾಗುತ್ತಿಲ್ಲ. ಈ ಕಡೆ ಕ್ರೈಸ್ತವರೊಳಗೆ ಆಗಲೀ, ಆಕಡೆ ಮುಸ್ಲಿಮ್‌ರೊಳಗೆ ಆಗಲಿ ಒಬ್ಬನು ಮತ ಬದಲಾಗಿ ಸೇರಿದ್ದಾನೆಂದರೆ ಅವನು ತಪ್ಪದೆ ಹಿಂದುವೇ ಆಗಿರುತ್ತಾನೆ. ಇಂದೂಗಳು ತಮ್ಮ ಮತವನ್ನು ಬಿಟ್ಟು ಇತರ ಮತಗಳೊಳಗೆ ಸೇರುವುದರಿಂದ ಕ್ರೈಸ್ತ ಬೆಳೆಯುತ್ತಿದೆ.

ಒಬ್ಬ ಹಿಂದೂಗಳು ಹೊರತು ಕ್ರೈಸ್ತರು, ಮುಸ್ಲಿಮ್‌ರು ತಮ್ಮ ಮತವನ್ನು ಬೆಳೆಸಿಕೊಳ್ಳಬೇಕೆನ್ನುವ ದೃಢ ನಿಶ್ಚಯದಿಂದ ಇದ್ದಾರೆ. ಅದಕ್ಕೆ ತಕ್ಕಹಾಗೆ ಎರಡು ಮತಗಳವರು ಹಿಂದೂಗಳನ್ನು ಆಕರ್ಷಿಸುವುದಕ್ಕೆ ಪೈಪೋಟೀಯಾಗಿ ಮುಂದಕ್ಕೆ ಹೋಗುತ್ತಿದ್ದಾರೆ. ಈ ಮಧ್ಯೆ ಎರಡು ಮತಗಳವರು ಹಿಂದೂಗಳಿಗೆ ಇಷ್ಟವಾದ ವೇದಗಳನ್ನು ಹೇಳಿ, ಅವುಗಳಲ್ಲಿ ತಮ್ಮ ಮತವನ್ನು ಕುರಿತು ಇದೆಯೆಂದು ತೋರಿಸಿ, ವೇದಗಳು ಸಹ ಬಲಪಡಿಸುತ್ತಿರುವ ತಮ್ಮ ಮತದೊಳಕ್ಕೆ ಬರಬೇಕೆಂದು ಹೇಳುವುದು ನಡೆಯುತ್ತಿದೆ. ಮೊದಲು ಈ ವೇದಗಳ ಘತಕವನ್ನು ಕ್ರೈಸ್ತರು ಪ್ರಾರಂಭಿಸಿ ಹಿಂದೂಗಳಲ್ಲಿ ವೇದಗಳಿಗೆ ಹತ್ತಿರವಾಗಿರುವ ಬ್ರಾಹ್ಮಣರನ್ನು ಸಹ ತಮ್ಮ ಮತದ ಕಡೆಗೆ ಎಳೆದುಕೊಳ್ಳುವುದು ನಡೆದಿದೆ. ಬ್ರಾಹ್ಮಣರಲ್ಲಿ ದೊಡ್ಡ ವಂಶವಾಗಿ ಹೆಸರುಹೊಂದಿದ ಪರವಸ್ತು ವಂಶದಿಂದ ಪರವಸ್ತು ಸೂರ್ಯನಾರಾಯಣ ಎನ್ನುವ ವ್ಯಕ್ತಿಯನ್ನು ತಮ್ಮ ಮತದಲ್ಲಿ ಸೇರಿಸಿಕೊಂಡು, ಆತನಿಗೆ ಫಾದರ್ ಕೆಲಸ ಕೊಟ್ಟು ಆತನಿಂದ ತಮ್ಮ ಮತವನ್ನು ಪ್ರಚಾರ ಮಾಡಿಸುವುದು ಸಹ ನಡೆಯುತ್ತಿದೆ.

ಈ ವಿಧವಾಗಿ ಕ್ರೈಸ್ತರು ಹೊಸ ಹೊಸ ಪದ್ಧತಿಗಳನ್ನು ಅನುಸರಿಸಿ ಹಿಂದೂಗಳನ್ನು ತಮ್ಮ ಮತದೊಳಕ್ಕೆ ಬದಲಾಯಿಸುವುದಕ್ಕೆ ಪ್ರಯತ್ನಿಸುತ್ತಿರುವಾಗ, ಅವರನ್ನು ನೋಡಿದ ಮುಸ್ಲಿಮ್‌ರು ಸಹ ಈ ಮಧ್ಯೆ ಕಾಲದಲ್ಲಿ ಹಿಂದೂಗಳನ್ನು ಆಕರ್ಷಿಸಿಕೊಂಡು ತಮ್ಮ ಮತದೊಳಕ್ಕೆ ಸೇರಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ. ಹಿಂದೂಗಳನ್ನು ನಾವು ಬದಲಾಯಿಸಲಿಲ್ಲವೆಂದು ಕ್ರೈಸ್ತರು, ಮುಸ್ಲಿಮ್‌ರು ಹೇಳಿದರೂ ಹಿಂದೂಗಳು ಮಾತ್ರ ಪರಮತದೊಳಕ್ಕೆ ಹೋಗುತ್ತಿದ್ದಾರೆನ್ನುವುದು ಎಲ್ಲರಿಗು ತಿಳಿದ ಸತ್ಯ. ಭಗವದ್ಗೀತೆಯಲ್ಲಿನ ಜ್ಞಾನವೇ ಬೈಬಲ್‌ನಲ್ಲೂ, ಖುರ್‌ಆನ್‌ನಲ್ಲೂ ಇರುವುದರಿಂದ ಮೂರೂ ಒಂದೇ ದೇವರನ್ನು ಕುರಿತು ಬೋಧಿಸುವ ಗ್ರಂಥಗಳೆಂದು ನಾವು ಹೇಳಿಕೊಂಡಿದ್ದೇವೆ. ಆದರೇ ಎಲ್ಲರೂ ಹಾಗೆ ಅಂದುಕೊಳ್ಳುತ್ತಿಲ್ಲ ಯಾರ ಮತವನ್ನು ಅವರು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಯಾರ ಮತವನ್ನು ಅವರು ಬೆಳಸಿಕೊಳ್ಳಬೇಕೆಂದು ನೋಡುತ್ತಿದ್ದಾರೆ. ಆ ಪ್ರಯತ್ನದಲ್ಲಿ ಕ್ರೈಸ್ತರನ್ನು ನೋಡಿದ ಮುಸ್ಲೀಮ್‌ರು ಸಹ ಅಂತರಂಗದಲ್ಲಿ ಮತವ್ಯಾಪ್ತಿ ದೃಷ್ಠಿಯನ್ನು ಇಟ್ಟುಕೊಂಡು, ಅಲ್ಲಲ್ಲಿ ಬೇರೆಬೇರೆ ಹೆಸರುಗಳಿಂದ ಯಾರಿಷ್ಟಕ್ಕವರು ಗುಂಪುಗಳಾಗಿ ಏರ್ಪಟ್ಟು, ಒಂದು ಸಂಘವನ್ನು ತಯಾರು ಮಾಡಿಕೊಂಡು, ಸಂಘದಿಂದ ಮತ ಪ್ರಚಾರ ಮಾಡಬೇಕೆಂದು ಕೊಂಡಿದ್ದಾರೆ. ಆದರೇ ಕ್ರೈಸ್ತರ ಹಾಗೆ ಪ್ರಲೋಭವಿಟ್ಟು ಮತವನ್ನು ಬದಲಾಯಿಸ ಬೇಕೆಂದುಕೊಂಡಿಲ್ಲ. ತಮ್ಮ ಮತದೊಳಗಿನ ಜ್ಞಾನವನ್ನು ಬೋಧಿಸಿ, ದೇವರು ಒಬ್ಬನೇಯೆಂದು ತಿಳಿಸಿ ತಮ್ಮ ಜ್ಞಾನವನ್ನು ಪ್ರಚಾರ ಮಾಡುತ್ತಾ, ಹಿಂದೂಗಳನ್ನು ತಮ್ಮ ಕಡೆ ಎಳೆದುಕೊಳ್ಳಬೇಕೆಂದುಕೊಂಡಿದ್ದಾರೆ. ಕ್ರೈಸ್ತರಿಗಿಂತ ಸ್ವಲ್ಪ ನೀತಿಯಿಂದ ಮುಸ್ಲಿಮ್‌ರು ಜ್ಞಾನ ಪ್ರಚಾರದಿಂದಲೇ ಹಿಂದೂಗಳನ್ನು ಆಕರ್ಷಿಸಿ ಕೊಳ್ಳಬೇಕೆಂದುಕೊಂಡಿದ್ದಾರೆ.

ಅನೇಕ ದೇವತಾರಾಧನೆಗಳಲ್ಲಿ ಮುಳುಗಿಹೋದ ಹಿಂದೂಗಳಿಗೆ ತಮ್ಮ ಏಕೇಶ್ವರೋಪಾಸನೆ (ತೌಹೀದ್)ನ್ನು ಕುರಿತು ಹೇಳಿ, ತಮ್ಮ ಕಡೆಗೆ ಆಕರ್ಷಿಸಿಕೊಳ್ಳಬೇಕೆಂದುಕೊಂಡ ಮುಸ್ಲಿಮ್‌ರು, ಅದಕ್ಕೆ ಸರಿಯಾದ ವಿಧವಾಗಿ

ಮೊದಲು ಅಲ್ಲಲ್ಲಿ ಕೆಲವು ಸಂಘಗಳನ್ನು ಸ್ಥಾಪಿಸಿದ್ದಾರೆ. ನಂತರ ಚೆನ್ನಾಗಿ ಜ್ಞಾಪಕಶಕ್ತಿ, ಪಾಂಡಿತ್ಯಶಕ್ತಿ ಇರುವವರನ್ನು ತಂದು ಸಂಘದಲ್ಲಿ ಮುಖ್ಯವಾದ ವ್ಯಕ್ತಿಗಳಾಗಿ ನೇಮಿಸಿಕೊಳ್ಳುತ್ತಾರೆ. ಮುಸ್ಲಿಮ್‌ರಲ್ಲಿ ಬುದ್ಧಿವಂತರು, ಜ್ಞಾಪಕಶಕ್ತಿ ಇರುವವರು, ಪಾಂಡಿತ್ಯವಿರುವವರು ಆ ಸಂಘದಲ್ಲಿ ಮುಖ್ಯರಾಗಿ ಇದ್ದೂ, ಈ ಕಡೆ ಖುರ್‌ಆನ್ ಎಲ್ಲಾ ಕಂಠಾಪಾಟ ಮಾಡಿರುವುದೇ ಅಲ್ಲದೆ, ಹಿಂದೂಗಳ ಧಾರ್ಮಿಕ ಗ್ರಂಥಗಳೆಂದು ಹೆಸರು ಹೊಂದಿದ ವೇದಗಳನ್ನು, ಉಪನಿಷತ್ತುಗಳನ್ನು, ಭಗವದ್ಗೀತೆಯನ್ನು ಪುಟಗಳ ನಂಬರುಗಳೊಂದಿಗೆ ಜ್ಞಾಪಕವಿಟ್ಟುಕೊಂಡು ಎಲ್ಲಿ ಬೇಕಾದರೆ ಅಲ್ಲಿ ಹೇಳುವಹಾಗೆ ಕಂಠಾಪಾಟ ಮಾಡಿಕೊಂಡಿರುತ್ತಾರೆ. ಬಹುಶಃ ಹಿಂದೂಗಳಲ್ಲಿ ವೇದಪಂಡಿತರು ಸಹ ಆ ವಿಧವಾಗಿ ಇರುವುದಿಲ್ಲವೇನೋ ಎನಿಸುತ್ತದೆ. ಆ ರೀತಿ ತರಭೇತಿ ಪಡೆದ ಮುಸ್ಲಿಮ್‌ರು ಸುಲಭವಾಗಿ ವೇದ ಗಳಲ್ಲಿಯೂ, ಉಪನಿಷತ್ತುಗಳಲ್ಲಿಯೂ ಸಂಸ್ಕೃತ ಶ್ಲೋಕಗಳನ್ನು ಹೇಳುತ್ತಿದ್ದಾರೆ. ಅವರು ಸಂಸ್ಕೃತ ಶ್ಲೋಕಗಳು ಹೇಳುವಾಗ ಕೇಳಿದರೆ ಇವರು ಮುಸ್ಲಿಮರೇನಾ ಎನಿಸುತ್ತದೆ. ಪುಟದ ನಂಬರ್ ಶ್ಲೋಕದ ನಂಬರೊಂದಿಗೆ ಸಹ ಹೇಳುವವರನ್ನು ಯಾರಾದರೂ ಆಶ್ಚರ್ಯದಿಂದ ನೋಡಬೇಕಾಗಿರುವುದೇ. ಅಂತಹ ಜ್ಞಾಪಕ ಶಕ್ತಿ ಇದ್ದರೂ ಅವರಿಗೆ ಮಾತ್ರ ದೇವರು ಜ್ಞಾನಶಕ್ತಿ ಕೊಡಲಿಲ್ಲ. ಆದ್ದರಿಂದ ಅವರಿಗಿರುವ ಪಾಂಡಿತ್ಯವನ್ನು ಉಪಯೋಗಿಸಿ ಹಿಂದೂಗಳನ್ನು ತಮ್ಮೊಳಗೆ ಎಳೆದುಕೊಳ್ಳಬೇಕೆಂದು ನೋಡುತ್ತಿದ್ದಾರೆ. ಆಗಾಗ ಅಲ್ಲಲ್ಲಿ ಯಾವುದೋ ಒಂದು ಹೆಸರಿಂದ ಸಮಾವೇಶಗಳು ಇಟ್ಟು ಅಲ್ಲಿ ಭಗವದ್ಗೀತೆಯನ್ನು, ವೇದಗಳನ್ನು, ಉಪನಿಷತ್ತುಗಳನ್ನು ಬದಲಾಯಿಸಿ ಹೇಳುತ್ತಾ, ಕೊನೆಗೆ ತಮ್ಮ ಜ್ಞಾನವೇ ದೊಡ್ಡದೆಂದು ಹೇಳುವುದು ನಡೆಯುತ್ತಿದೆ. ಭಗವದ್ಗೀತೆಯಲ್ಲಾಗಲೀ, ವೇದಗಳಲ್ಲಾಗಲೀ, ಉಪನಿಷತ್ತುಗಳಲ್ಲಾಗಲೀ ಅವರಿಗೆ ಅನುಕೂಲವಾದ ಶ್ಲೋಕಗಳನ್ನು ಮಾತ್ರ ತೆಗೆದುಕೊಂಡು ಹೇಳುವುದರಿಂದ ಕೇಳುವವರೆಲ್ಲರೂ ಅವರ ಮಾತೇ ಸತ್ಯ ಎಂದುಕೊಳ್ಳುವಹಾಗೆ ಇರುತ್ತದೆ. ಇಂದೂ ಮತದಲ್ಲಿನ ಸಂಪೂರ್ಣ ಜ್ಞಾನಿಗಳಿಗೆ ಅವರ ಮಾತುಗಳಲ್ಲಿನ ಲೋಪಗಳು ಕಾಣಿಸದೆ ಹೇಳುವುದೆಲ್ಲಾ ಸತ್ಯವೆಂದು ನಂಬುವಹಾಗಿರುತ್ತದೆ. ಮುಸ್ಲೀಮ್‌ರವರ

ಬೋಧನೆಗಳಿಂದ ಇತರರನ್ನು ಜ್ಞಾನಿಗಳಾಗಿ ಬದಲಾಯಿಸಬೇಕೆನ್ನುವ ಉದ್ದೇಶದಿಂದ ಹೇಳುವುದು ಒಳ್ಳೆಯ ಪದ್ಧತಿಯೇ ಆದರೂ, ಅವರು ಒಂದು ಜ್ಞಾನ ವಿಷಯದಲ್ಲಿನ ಸೂಕ್ಷ್ಮ ವಿಷಯವನ್ನು ಹೇಳದೆ ಸ್ಥೂಲವಾಗಿಯೇ ಹೇಳುವುದರಿಂದ ಜ್ಞಾನ ತಿಳಿದವರಿಗೆ ಅವರ ಮಾತುಗಳಲ್ಲಿ ಲೋಪ ಕಾಣಿಸಿದರೂ, ಜ್ಞಾನ ತಿಳಿಯದವರಿಗೆ ಯಾವ ಲೋಪ ಕಾಣಿಸದೆ ದೇವರು ನಿಜವಾಗಿ ಹಾಗೇ ಹೇಳಿದ್ದಾನೇನೋ ಎನಿಸುತ್ತದೆ.

ಹಿಂದೂ ಮತದಲ್ಲಿ ದೇವತೆಗಳನ್ನು ಪೂಜಿಸುವುದು ಹೊರತು, ಹಿಂದೂ ಧರ್ಮಗಳಾವುವೊ ತಿಳಿಯದ ಕಾರಣದಿಂದ, ಹಿಂದೂಗಳಲ್ಲಿ ಸ್ವಲ್ಪ ಅಸಂತೃಪ್ತಿ ಇರುವುದು ವಾಸ್ತವವೇ. ಅಷ್ಟೇ ಅಲ್ಲದೆ ಹಿಂದೂಮತದಲ್ಲಿ ಅಂಟಬಾರದತನ ಕುಲ ವಿಪಕ್ಷ, ದೇವರಿಗೆ ನಾವೇ ಹತ್ತಿರದವರೆನ್ನುವಹಾಗೆ ಒಂದು ವರ್ಗದವರೇ ಪೂಜಾರಿಗಳಾಗಿ ಇರುವುದೂ, ಒಂದು ವರ್ಗದವರು ಹೇಳಿದಹಾಗೇ ಉಳಿದವರೆಲ್ಲರೂ ಕೇಳಬೇಕೆಂದು ಹೇಳುವುದೂ ಮೊದಲಾದ ಕಾರಣಗಳಿಂದ, ಹಿಂದೂಗಳು ಪೂರ್ತಿ ಸ್ವತಂತ್ರ ಹಿಂದೂಗಳಾಗಿ ಅಲ್ಲದೆ ಕೆಲವರ ಅಧೀನದಲ್ಲಿಯೇ ಇರುವುದರಿಂದ, ಹಿಂದೂಗಳೆಲ್ಲರಿಗೂ ನಾವೇ ಹಿರಿಯರೆನ್ನುವಹಾಗೆ ಇತರರು ಪ್ರವರ್ತಿಸುವುದರಿಂದ, ಹಿಂದೂಗಳಲ್ಲಿನ ಬಹಳ ಜನ ಚಿಕ್ಕ ಕುಲದವರೆಲ್ಲರೂ ಹಿಂದೂ ಮತದಲ್ಲಿ ಅಸಂತೃಪ್ತಿ ಹೊಂದಿರುವಹಾಗೆ ಗ್ರಹಿಸಿದ ಕ್ರೈಸ್ತರು, ಮುಸ್ಲಿಮ್‌ರು ತಮ್ಮ ಬೋಧನೆಗಳಿಂದ ಕೆಲವರು, ಲಾಭ ತೋರಿಸಿ, ಪ್ರಲೋಭವಿಟ್ಟು ಕೆಲವರೂ ಹಿಂದೂಗಳನ್ನು ತಮ್ಮ ಮತದೊಳಕ್ಕೆ ಬದಲಾಯಿಸಿಕೊಂಡಿದ್ದಾರೆ. ಹಿಂದೂಮತದಲ್ಲಿ ಅದ್ವೈತ, ವಿಶಿಷ್ಟಾದ್ವೈತ, ದ್ವೈತ ಸಿದ್ಧಾಂತಗಳಿರುವಹಾಗೇ ನಾವು ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿ, ತ್ರೈತ ಸಿದ್ಧಾಂತ ಭಗವದ್ಗೀತೆ ಯಲ್ಲಿದೆಯೆಂದು ತೋರಿಸುತ್ತಾ, ನಾವು ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದು ಬಿಡುಗಡೆ ಮಾಡಿದರೆ, ಹಿಂದೂ ಮತಕ್ಕೆ ನಾವೇ ಹಿರಿಯರೆಂದು ಕೊಳ್ಳುವವರು ನಮ್ಮನ್ನು ನೋಡಿ ಸಹಿಸಲಾರದೆ ನಾವು ಕ್ರೈಸ್ತರ ಪರವಾಗಿ ಬೋಧಿಸುತ್ತಿದ್ದೇವೆಂದು, ತ್ರೈತ ಸಿದ್ಧಾಂತ ಭಗವದ್ಗೀತೆಯೂ ಸಹ ಕ್ರೈಸ್ತವನ್ನು

ಬಲಪಡಿಸುವುದೇಯೆಂದು ಪ್ರಚಾರ ಮಾಡಿ ನಮ್ಮನ್ನು ಹೀಯಾಳಿಸುವಹಾಗೆ ಮಾತನಾಡುವುದು ನಡೆದಿದೆ. ಆ ವಿಷಯವನ್ನು ತಿಳಿದುಕೊಂಡ ಕ್ರೈಸ್ತರು, ನಮ್ಮನ್ನು ತಮ್ಮ ಮತದೊಳಕ್ಕೆ ಆಹ್ವಾನಿಸುವುದು ನಡೆದಿದೆ. ಆಗ ಅವರಿಗೆ ನಾವು ಮತ ಮಾರ್ಪಾಟು ದೈವ ದ್ರೋಹ ಆಗುತ್ತದೆ ನಾವು ಮತವನ್ನು ಬದಲಾಯಿಸುವುದಿಲ್ಲ ಎಂದು ಕೂಡಾ ಖಂಡಿತವಾಗಿ ಹೇಳುವುದು ನಡೆದಿದೆ.

ವಾಸ್ತವಕ್ಕೆ ನಮ್ಮ ಬೋಧನೆಗಳು ಯಾವ ಮತಕ್ಕೂ ವಿರುದ್ಧವಾಗಿ ಇರುವುದಿಲ್ಲ. ಭಗವದ್ಗೀತೆಯಲ್ಲಿನ ಜ್ಞಾನವನ್ನೇ ನಾವು ಹೇಳುತ್ತಿರುವುದರಿಂದ, ಭಗವದ್ಗೀತೆ ಜ್ಞಾನವೇ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಿ ಇರುವುದರಿಂದ ನಮ್ಮ ಬೋಧನೆಗಳು ಯಾವ ಮತಕ್ಕೂ ವಿರುದ್ಧವಲ್ಲ. ಗೀತೆಯಲ್ಲಿ ಏಕೇಶ್ವರೋಪಾಸನೆ ಇದೆಯೆಂದು ನಾವು ಹೇಳುವುದರಿಂದ, ಹಿಂದೂಗಳಲ್ಲಿನ ಕೆಲವರು ಸ್ವಾರ್ಥವಿರುವ ಸ್ವಾಮೀಜೀಗಳಿಗೆ ಮತ ಹಿರಿಯರೆಂದುಕೊಳ್ಳುವವರಿಗೆ ನಾವು ಸ್ವಲ್ಪ ವಿರುದ್ಧವಾಗಿ ಕಾಣಿಸುವುದರಿಂದ, ಸುಮಾರು ಎರಡು ಸಂವತ್ಸರಗಳ ಕೆಳಗೆ ನಮ್ಮ ಭಕ್ತರ ಮೇಲೆ ಹಿಂದೂ ರಕ್ಷಕರೆನ್ನುವವರು ದಾಳಿ ಮಾಡಿದಾಗ, ನಮ್ಮ ಭಕ್ತರು ಪ್ರೆಸ್‌ಮೀಟ್ ಇಟ್ಟು "ನಾವು ಹಿಂದೂಗಳಾದರೂ ನಮ್ಮನ್ನು ಹಿಂದೂಗಳೇ ಅನವಶ್ಯವಾಗಿ ಅವಮಾನಿಸುತ್ತಿದ್ದಾರೆ. ನಮ್ಮನ್ನು ನೀವು ಹಿಂದೂಗಳೇ ಅಲ್ಲ, ಕ್ರೈಸ್ತರೆಂದು ಅನ್ನುತ್ತಿದ್ದಾರೆ. ಹಾಗಿರುವಾಗ ನಾವು ಹಿಂದೂಮತದಲ್ಲಿ ಇದ್ದು ಏನು ಪ್ರಯೋಜನ? ನಮ್ಮನ್ನು ಅನವಶ್ಯವಾಗಿ ವೇಧಿಸುವವರಿರುವ ಮತದಲ್ಲಿ ನಾವು ಇರಬೇಕೆಂದುಕೊಂಡಿಲ್ಲ. ಆದ್ದರಿಂದ ನಾವು ಸಾಮೂಹಿಕವಾಗಿ ಸಾವಿರ ಜನ ಇಸ್ಲಾಮ್ ಮತದಲ್ಲಿ ಸೇರಬೇಕೆಂದುಕೊಂಡಿದ್ದೇವೆಂದು" ಹೈದರಾಬಾದ್‌ನಲ್ಲಿ ಬಷೀರ್‌ಬಾಗ್ ಪ್ರೆಸ್‌ಕ್ಲಬ್‌ನಲ್ಲಿ ಪ್ರೆಸ್‌ಮೀಟ್‌ನಲ್ಲಿ ಹೇಳುವುದು ನಡೆದಿದೆ. ಆ ವಿಷಯವನ್ನು ತಿಳಿದ ನಾವು ನಮ್ಮ ಭಕ್ತರನ್ನು ಕರೆದು ಹೆಚ್ಚರಿಸಿ "ಹಿಂದೂ ಮತದಲ್ಲಿ ವಿಪಕ್ಷಗಳಿಂದ ಪೂರ್ವದಿಂದ ಇದೇ ವಿಧವಾಗಿಯೇ ಕ್ಷೀಣಿಸುತ್ತಾ ಬರುತ್ತಿದೆ. ಹಿಂದೂಮತಕ್ಕೆ ಹಿರಿಯರು ಎನ್ನುವವರು ತೋರಿಸಿದ ವಿಪಕ್ಷೆಯಿಂದ ಹಿಂದೂಗಳಲ್ಲಿಂದ

ಬೌದ್ಧಮತ ಸೀಳಿಹೋಗಿದೆ. ಬುದ್ಧನು ಶೂದ್ರನು ಎನ್ನುವ ವಿಪಕ್ಷೆಯಿಂದ ನಡೆದ ಕೆಲಸ ಅದು. ಈ ದಿನ ಸಹ ತ್ರೈತ ಸಿದ್ಧಾಂತಕರ್ತನಾದ ನಾನು ಶೂದ್ರನೆನ್ನುವ ಭಾವದಿಂದಲೇ ತ್ರೈತ ಸಿದ್ಧಾಂತ ಹಿಂದೂತ್ವ ಅಲ್ಲ ಕ್ರೈಸ್ತವೆಂದು ಕೆಲವರನ್ನುತ್ತಿದ್ದಾರೆ. ಅವರ ಮಾತುಗಳನ್ನು ಲೆಕ್ಕಿಸಿ ನಾವು ಮತ ಬದಲಾದರೆ ಹಿಂದೂ ಮತ ಇನ್ನೂ ಕ್ಷೀಣಿಸಿ ಹೋಗಬಲ್ಲದು. ವಾಸ್ತವವಾಗಿ ಈ ದಿನ ಕ್ಷೀಣ ದಶೆಯಲ್ಲಿರುವ ಹಿಂದೂ ಮತವನ್ನು ನಾವೇ ರಕ್ಷಿಸುವವರಾಗಿ ಇರಬೇಕು. ಅವರ ಮಾತುಗಳಿಗೆ ರೊಚ್ಚಿಗೆದ್ದು ಮತವನ್ನು ಬದಲಾಗಬೇಡವೆಂದು" ಹೇಳುವುದು ನಡೆದಿದೆ.

ನಡೆದ ಎಲ್ಲಾ ವಿಷಯಗಳು ತಿಳಿಯದಿದ್ದರೂ ಪ್ರೆಸ್‌ಮೀಟ್‌ನಲ್ಲಿ ಕೊಟ್ಟಿರುವ ಸಮಾಚಾರ, ನಾವು ಮುಸ್ಲಿಮ್ ಮತದೊಳಕ್ಕೆ ಬದಲಾಗ ಬೇಕೆಂದುಕೊಂಡಿರುವುದು, ಹಿಂದೂ ಮತದಲ್ಲಿನ ವಿಪಕ್ಷದಿಂದ ಈ ಮತದಲ್ಲಿ ಇರಲಾರದೆ ಹೋಗುತ್ತಿದ್ದೇವೆಂದು ಕೊಟ್ಟಿರುವ ಸಮಾಚಾರ, ಕೆಲವರು ಮುಸ್ಲಿಮ್ ಹಿರಿಯರಿಗೆ ತಿಳಿದುಹೋಗಿರುವುದರಿಂದ ಹತ್ತು ಜನ ಮುಸ್ಲಿಮ್ ಹಿರಿಯರು ವೈಜಾಗ್‌ನಲ್ಲಿ ನನ್ನೊಂದಿಗೆ ಭೇಟಿಯಾಗಿ ಮಾತನಾಡಿ ಅವರ ಮತದೊಳಕ್ಕೆ ನಮ್ಮನ್ನು ಆಹ್ವಾನಿಸುವುದು ನಡೆದಿದೆ. ಆದರೇ ಆ ದಿನ ನಾನು ಮುಸ್ಲಿಮ್ ಮತದೊಳಕ್ಕೆ ಬರುವುದಿಲ್ಲವೆಂದು ಹೇಳಲಿಲ್ಲ. ಹಿಂದೂ ಮತವನ್ನು ಬಿಟ್ಟು ಇಸ್ಲಾಮ್ ಮತವನ್ನು ಸ್ವೀಕರಿಸುತ್ತೇನೆಂದು ಹೇಳುವುದು ನಡೆದಿದೆ. ಆದರೇ ನಾವು ಮತ ಬದಲಾಗುವುದಕ್ಕೆ ಒಂದು ಷರತ್ತ(ಕಂಡೀಷನ್)ನ್ನು ಇಟ್ಟಿದ್ದೇವೆ. ಆ ಷರತು ಈಡೇರಲಿಲ್ಲ, ನಾನು ಮತವನ್ನು ಬದಲಾಗಲಿಲ್ಲ. ಸುಮಾರು ಎರಡು ವರ್ಷಗಳ ಕೆಳಗೆ ನಡೆದ ಸಂಘಟನೆಯನ್ನು ಪೂರ್ತಿ ವಿವರವಾಗಿ ಹೇಳುತ್ತೇನೆ ನೋಡಿರಿ.

**ಮುಸ್ಲಿಮ್ ಹಿರಿಯರು :–** ಹಿಂದೂಮತದಲ್ಲಿ ಗುರುವಾಗಿ ನಿಮ್ಮನ್ನು ಬಹಳ ಜನ ಹೇಳಿಕೊಳ್ಳುತ್ತಿದ್ದಾರೆ. ನೀವು ಎಲ್ಲರ ಗುರುಗಳ ಹಾಗೆ ಅಲ್ಲದೆ ಎಲ್ಲರಿಗೂ ಒಬ್ಬನೇ ದೇವರು ಎಂದು ಏಕೇಶ್ವರನನ್ನು ಕುರಿತು ಹೇಳುತ್ತಿದ್ದೀರ. ನಮ್ಮ ಮತದಲ್ಲಿ ಆ ವಿಧಾನವನ್ನು ತೌಹೀದ್ ಎನ್ನುತ್ತೇವೆ. ನಿಮ್ಮ ಭಾವನೆಗಳು ನಮ್ಮ

ಭಾವನೆಗಳಿಗೆ ಬಹಳ ಹತ್ತಿರವಾಗಿ ಇವೆ. ಆದ್ದರಿಂದ ನೀವು ನಮ್ಮ ಮತದೊಳಗೆ ಬಂದರೆ ನಾವು ನಿಮ್ಮನ್ನು ಮತ ಹಿರಿಯರಾಗಿ ಎಲ್ಲರಿಗೂ ಪರಿಚಯ ಮಾಡಿಸುತ್ತೇವೆ. ನಿಮ್ಮನ್ನು ನಮ್ಮ ಮತದೊಳಗೆ ಆಹ್ವಾನಿಸುತ್ತಿದ್ದೇವೆ. ನೀವು ನಮ್ಮ ಮಾತುಗಳನ್ನು ಗೌರವಿಸಿ ನಮ್ಮ ಮತದಲ್ಲಿ ಸೇರುತ್ತೀರೆಂದುಕೊಳ್ಳುತ್ತಿದ್ದೇವೆ.

**ನಾನು :–** ನನಗೆ ಇಸ್ಲಾಮ್ ಎಂದರೆ ಗೌರವ. ಆದ್ದರಿಂದ ನಾನು ನೀವು ಹೇಳಿದಹಾಗೆ ಇಸ್ಲಾಮ್‌ನಲ್ಲಿ ಸೇರಬಲ್ಲೆನು ಆದರೆ, ನಾನು ಗುರುವಾಗಿ ಇರುತ್ತಿದ್ದೇನೆಂದು ನೀವೇ ಹೇಳುತ್ತಿದ್ದೀರಲ್ಲವೆ! ಹಾಗಿರುವಾಗ ಯಾರಾದರೂ ದೈವಜ್ಞಾನಕ್ಕೆ ಸಂಬಂಧಿಸಿದ ವಿಷಯವನ್ನು ಅರ್ಥವಾಗದೆ ನನ್ನನ್ನು ಕೇಳಿದರೆ ಅದನ್ನು ವಿಶದೀಕರಿಸಿ ಹೇಳಬೇಕಲ್ಲವೆ! ನಾನು ಭಗವದ್ಗೀತೆಯಲ್ಲಿನ ವಿಷಯಗಳಾದರೆ ಹೇಳಬಲ್ಲೆನು. ನಾನು ಇಸ್ಲಾಮ್‌ನಲ್ಲಿ ಸೇರಿದ ನಂತರ ಯಾರಾದರೂ ಖುರ್‌ಆನ್ ಗ್ರಂಥದಲ್ಲಿ ಜ್ಞಾನವಾಕ್ಯವನ್ನು ಕೇಳಿದರೆ ಆಗ ಭಗವದ್ಗೀತೆಯನ್ನು ಹೇಳಿದಹಾಗೆ ಖುರ್‌ಆನ್ ವಾಕ್ಯಗಳನ್ನು ಹೇಳಲಾರೆನು ಅಲ್ಲವೆ! ಅಂತಹವನು ನಾನು ಇಸ್ಲಾಮ್‌ದಲ್ಲಿ ಸೇರಿದರೆ ಅತ್ತ ಪ್ರಜೆಗಳಿಗೂ ಇತ್ತ ನನಗು ಇಬ್ಬರಿಗೂ ಕಷ್ಟವೇ ಅಲ್ಲವೇ!

**ಮುಸ್ಲೀಮ್ ಹಿರಿಯರು :–** ನೀವು ಭಗವದ್ಗೀತೆಯನ್ನು ಓದಿದ ಹಾಗೇ ಖುರ್‌ಆನ್ ಗ್ರಂಥವನ್ನು ಎರಡು ಬಾರಿ ಚೆನ್ನಾಗಿ ಓದಿದರೇ ಯಾವ ವಾಕ್ಯಕ್ಕಾದರೂ ಉತ್ತರ ಹೇಳುತ್ತೀರ. ನೀವು ಓದಿ ನೋಡಿ. ಯಾವ ವಿಷಯವಾದರೂ ಸುಲಭವಾಗಿ ವಿವರಿಸಿ ಹೇಳಬಹುದೆಂದು ನಿಮಿಗೇ ತಿಳಿದುಬರುತ್ತದೆ.

**ನಾನು :–** ನಾನು ಇದಕ್ಕೂ ಮೊದಲೇ ಎರಡು ಬಾರಿ ಅಲ್ಲ ನಾಲ್ಕು ಬಾರಿ ಓದಿದ್ದೇನೆ. ಆದರೇ ಅದರಲ್ಲಿನ ಕೆಲವು ವಿಷಯಗಳು ಮಾತ್ರ ಅರ್ಥವಾಗಿವೆ ಆದರೆ ಉಳಿದ ಬಹಳ ವಿಷಯಗಳು ಅರ್ಥವಾಗಲಿಲ್ಲ.

**ಮುಸ್ಲೀಮ್ ಹಿರಿಯರು :–** ನಿಮಗೆ ಏನಾದರೂ ಅರ್ಥವಾಗದ ಆಯತ್ (ವಾಕ್ಯ) ಇದ್ದರೇ ನಮ್ಮನ್ನು ಕೇಳಿ. ನಾವು ಒಂದು ಬಾರಿ ವಿವರಿಸಿ ಹೇಳಿದರೇ ಅದನ್ನು ನೀವು ಯಾವಾಗಾದರೂ ಸುಲಭವಾಗಿ ವಿವರಿಸಿ ಹೇಳುತ್ತೀರ.

ನಾನು :– ನಾನು ಇದಕ್ಕೂ ಮೊದಲು ಕೆಲವು ವಾಕ್ಯಗಳನ್ನು ಕುರಿತು ಕೆಲವರು ಮುಸ್ಲೀಮರನ್ನು ಕೇಳಿದ್ದೇನೆ. ಆಗ ಅವರು ಹೇಳಿರುವುದು ನೋಡಿದರೆ ನೆಲವಿಗೆ ಹತ್ತದವಳು ಸ್ವರ್ಗಕ್ಕೆ ಹೇಗೆ ಹತ್ತುತ್ತಾಳೆನ್ನುವ ಹಾಗೆ ಉತ್ತರವನ್ನು ಹೇಳಿದ್ದಾರೆ. ಅದನ್ನು ನೋಡಿದ ನಂತರ ಖುರ್‌ಆನ್ ಎಂದರೆ ಮುಸ್ಲೀಮ್‌ರಿಗೆ ಸರಿಯಾಗಿ ತಿಳಿಯದೆಂದು, ಹಾಗಿರುವಾಗ ನಾನು ಹೇಗೆ ಹೇಳಬಲ್ಲೆನೆನ್ನುವ ಅಪನಂಬಿಕೆ ಏರ್ಪಟ್ಟಿದೆ.

**ಮುಸ್ಲೀಮ್ ಹಿರಿಯರು :–** ನೀವು ಏನು ಕೇಳಿದ್ದೀರೋ, ಅವರು ಏನು ಹೇಳಿದ್ದಾರೋ! ಈಗ ನೀವು ಕೇಳಿ ನಿಮಗೆ ತಿಳಿಯದಿರುವುದು ಏನಾದರೂ ಇದ್ದರೆ ನಾವು ವಿವರವಾಗಿ ಅರ್ಥವಾಗುವಹಾಗೆ ಹೇಳುತ್ತೇವೆ. ಒಂದು ಬಾರಿ ಅರ್ಥವಾದರೆ ಖುರ್‌ಆನ್‌ನಲ್ಲಿ ವಿಷಯಗಳನ್ನು ಸುಲಭವಾಗಿ ಹೇಳಬಹುದು. ನಿಮಗೆ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ, ಪುನಃ ವಿವರವಾಗಿ ಹೇಳುವ ಸಾಮರ್ಥ್ಯ ಎರಡೂ ಇವೆ.

(ಆಗ ನಾನು ಖುರ್‌ಆನ್‌ನಲ್ಲಿನ ಆರನೆ ಸುರಾದಲ್ಲಿ 95ನೇ ಆಯತ್‌ನ್ನು (ವಾಕ್ಯವನ್ನು) ಕುರಿತು ಕೇಳುವುದು ನಡೆದಿದೆ. ಆದರೇ ಅವರು ಆ ವಾಕ್ಯಕ್ಕೆ ಸರಿಯಾದ ಸಮಾಧಾನವನ್ನು ಎಷ್ಟು ಪ್ರಯತ್ನಿಸಿದರೂ ಹೇಳಲಾರದೆ ಹೋಗಿದ್ದಾರೆ. ಕೊನೆಗೆ ಅದನ್ನು ದಾಟಿಹೋಗಬೇಕೆಂದು ನೋಡಿದರೆ ಅದಕ್ಕೆ ನಾವು ಒಪ್ಪಿಕೊಳ್ಳಲಿಲ್ಲ. ಯಾವುದೋ ಒಂದು ಸಮಾಧಾನವನ್ನು ಹೇಳಿ ಸರಿ ಮಾಡಬೇಕೆಂದುಕೊಂಡರೂ ನಾವು ಒಪ್ಪಿಕೊಳ್ಳದೆ ಪೂರ್ತಿ ವಿವರವನ್ನು ಕೇಳಿದ್ದೇವೆ. ಆಗ ಅವರು ಆ ವಿಷಯದಲ್ಲಿ ಪೂರ್ತಿ ಇಕ್ಕಟ್ಟಿನಲ್ಲಿ ಸಿಕ್ಕಿಹಾಕಿಕೊಂಡಿದ್ದಾರೆಂದು ನಮಗೆ ಅರ್ಥವಾಯಿತು. ಖುರ್‌ಆನ್ ಗ್ರಂಥದಲ್ಲಿ ಅಲ್ಲಲ್ಲಿ ಬೆಲೆಯುಳ್ಳ ರತ್ನಗಳ ಹಾಗೆ ಆಗೊಂದು, ಆಗೊಂದು ವಾಕ್ಯಗಳು ಬರುತ್ತಿರುತ್ತವೆ. ವಜ್ರದೊಂದಿಗೆ ಸಮಾನವಾದಂತಹ ವಾಕ್ಯಗಳನ್ನು ವಿವರಿಸಿ ಹೇಳುವುದು ಯಾರಿಗಾದರೂ ದುಸ್ಸಾಧ್ಯವೇ. ಆ ವಿಷಯ ಅವರಿಗೆ ತಿಳಿಯದೆ ನಾವು ಹೇಳುವವೆಂದು ನನ್ನೊಂದಿಗೆ ಒಪ್ಪಿಕೊಂಡಿದ್ದಾರೆ. ಆಗ ನಾನು ಕೇಳಿದ

ಆರನೆಯ ಸೂರಾ 95ನೇ ವಾಕ್ಯವೊಂದರ ವಿವರ ತಿಳಿಯಬೇಕೆಂದೆರೇ, ಸೈನ್ಸ್ ಪ್ರಕಾರ ನೂರು ಸಂವತ್ಸರಗಳು ವಿಜ್ಞಾನತಜ್ಞರು ಪರಿಶೋಧನೆ ಮಾಡಬೇಕಾಗಿರುತ್ತದೆ. ಆಗಲೂ ಪರಿಶೋಧನೆ ಪೂರ್ತಿ ಆದರೇ ಹೇಳಬಲ್ಲರು. ಇಲ್ಲದೆ ಹೋದರೆ ಇಲ್ಲ. ಖುರ್‌ಆನ್ ಗ್ರಂಥವನ್ನು ಓದು ಬಾರದ ವ್ಯಕ್ತಿ ಆದ ಮುಹಮ್ಮದ್ ಪ್ರವಕ್ತರವರು ಹೇಳಿದರೂ, ಆತನಿಗೆ ಹೇಳಿರುವುದು ಖಗೋಳದಲ್ಲಿ ದೈವಜ್ಞಾನವನ್ನು ತಿಳಿದ ಜಿಬ್ರಯೇಲ್ ಗ್ರಹ. ಆದ್ದರಿಂದ ಬಹಳ ಕಡೆ ವಿಜ್ಞಾನವೇತ್ತರಿಗು ಸಹ ಅರ್ಥವಾಗದ ವಿಜ್ಞಾನವೂ, ಆಧ್ಯಾತ್ಮಿಕವೇತ್ತರಿಗೂ ಸಹ ಅರ್ಥವಾಗದ ಆತ್ಮಜ್ಞಾನ ಇರುವುದರಿಂದ, ಖುರ್‌ಆನ್ ಗ್ರಂಥ ಸಂಪೂರ್ಣವಾಗಿ ಅರ್ಥವಾಗಿದೆಯೆಂದು ಯಾರೂ ಧೈರ್ಯವಾಗಿ ಹೇಳಲಾರರು. ಖುರ್‌ಆನ್‌ನಲ್ಲಿ ಅಂತಹ ವಾಕ್ಯಗಳು ಬಂದಾಗ ಇದು ಕಷ್ಟವಾದ ವಾಕ್ಯ ಎನ್ನುವಹಾಗೆ, ವಾಕ್ಯದ ಕೊನೆಯಲ್ಲಿ ಯಾವುದೋ ಒಂದು ಗುರುತಾಗಿ ಬರೆಯಲಾಗಿರುತ್ತದೆ. ಅದನ್ನನುಸರಿಸಿ ಅದು ಕಷ್ಟವಾದ ವಾಕ್ಯವೆಂದು ಅರ್ಥ ಮಾಡಿಕೊಳ್ಳಬಹುದು. ನಾನು ಕೇಳಿದ ವಾಕ್ಯದ ಕೊನೆಯಲ್ಲಿ **“ಸತ್ಯದಿಂದ ಯಾವ ಕಡೆ ಹೋಗುತ್ತಿದ್ದೀರಾ”** ಎಂದು ಇದೆ. ಅದರ ಅರ್ಥ ಈ ವಾಕ್ಯವನ್ನು ನೀವು ಸರಿಯಾಗಿ ಅರ್ಥ ಮಾಡಿಕೊಂಡಿಲ್ಲವೆಂದು ಭಾವನೆ. ಇಂತಹದೇ 3ನೇ ಸೂರಾ 7ನೇ ಆಯತ್ ಕೊನೆಯಲ್ಲಿ ಸಹ ಹೀಗೆ ಇದೆ. **“ಬುದ್ಧಿ ಜ್ಞಾನ ಇರುವವರು ಮಾತ್ರವೇ ಹಿತಬೋಧನೆ ಗ್ರಹಿಸುತ್ತಾರೆ”** ಎಂದು ಇದೆ. ಈ ವಿಧವಾಗಿ ಇರುವ ಕಡೆ ಕಷ್ಟವಾದ ವಾಕ್ಯವಿದೆಯೆಂದು ತಿಳಿಯಬಹುದು. ಆದರೇ ಮುಸ್ಲೀಮ್‌ರು ಈ ವಿಷಯವನ್ನು ತಿಳಿಯಲಾರದೆ ಎಲ್ಲವನ್ನೂ ಸಾಧಾರಣ ವಾಕ್ಯಗಳಾಗಿ ತಿಳಿದಿದ್ದಾರೆ. ಆದ್ದರಿಂದ ನಾನು ಕೇಳಿದ ಆರನೆಯ ಸೂರಾ 95ನೇ ವಾಕ್ಯಕ್ಕೆ ಸರಿಯಾಗಿ ವಿವರ ಹೇಳಲಾರದೆ ಬೆಪ್ಪರಾಗಿದ್ದಾರೆ. ಆ ದಿನ ನಮಗೆ ನಡೆದ ಸಂಭಾಷಣೆ ಕೆಳಗೆ ಬರೆಯುತ್ತಿದ್ದೇವೆ ನೋಡಿರಿ.)

**ನಾನು :–** ಖುರ್‌ಆನ್ ಗ್ರಂಥದಲ್ಲಿ ಅಲ್ಲಲ್ಲಿ ಯಾರಿಗೂ ಅರ್ಥವಾಗದ ವಾಕ್ಯಗಳು ಇರುವಹಾಗೆ ಕಾಣಿಸುತ್ತಿದೆ. ಅಂತಹವುಗಳಲ್ಲಿ ಕೆಲವು ವಾಕ್ಯಗಳನ್ನು ಕುರಿತು

ಕೇಳುತ್ತೇನೆ, ಅವುಗಳಿಗೆ ವಿವರ ನೀವು ಹೇಳುವುದಾದರೆ ನನಗೆ ಖುರ್‌ಆನ್ ಗ್ರಂಥ ಅರ್ಥವಾದಹಾಗೇ. ಆಗ ನಾನು ಮುಸ್ಲಿಮ್ ಮತದೊಳಕ್ಕೆ ಸೇರಿದರೂ ಯಾರಾದರೂ ಕೇಳಿರುವುದಕ್ಕೆ ಉತ್ತರ ಹೇಳಬಲ್ಲೆನು. ಹಾಗಲ್ಲದೆ ಯಾರಾದರೂ ಖುರ್‌ಆನ್ ಗ್ರಂಥದಲ್ಲಿ ಯಾವುದಾದರೂ ಸಂಶಯವನ್ನು ಕೇಳಿದಾಗ, ನಾನು ಹೇಳಲಾರದೇ ಹೋದರೇ ನಾನು ಮುಸ್ಲಿಮ್ ಮತದೊಳಕ್ಕೆ ಬಂದು ಪ್ರಯೋಜನವಿರುವುದಿಲ್ಲ. ಆದ್ದರಿಂದ ಮೊದಲು ಖುರ್‌ಆನ್ ಗ್ರಂಥವನ್ನು ಅರ್ಥ ಮಾಡಿಕೊಂಡ ನಂತರ, ನೀವು ಹೇಳಿದಹಾಗೇ ನಾನು ನಿಮ್ಮ ಮತದೊಳಕ್ಕೆ ಬಂದರೂ ಚೆನ್ನಾಗಿರುತ್ತದೆ. ಖುರ್‌ಆನ್ ಗ್ರಂಥದಲ್ಲಿನ ವಿಷಯಗಳಿಗೆ ವಿವರ ತಿಳಿಯದೆ ಮುಸ್ಲಿಂಆಗಿ ಬದಲಾಗುವುದಕ್ಕಿಂತ ಸುಮ್ಮನಿರುವುದು ವಾಸಿ. ಈಗ ನನಗೆ ಅರ್ಥವಾಗದ ಎಷ್ಟೋ ವಿಷಯಗಳಲ್ಲಿ ಒಂದನ್ನು ಕುರಿತು ಕೇಳುತ್ತೇನೆ ಅದನ್ನು ಕುರಿತು ಹೇಳಿ. ಆರನೇ ಸೂರಾದಲ್ಲಿ 95ನೇ ಆಯತ್ (ವಾಕ್ಯ) ಹೀಗೆ ಇದೆ. **"ನಿಸ್ಸಂದೇಹವಾಗಿ ಬೀಜವನ್ನು, ಚಿಪ್ಪೆಯನ್ನು ಸೀಳಿಸುವವನು ದೇವರೇ, ಆತನು ಜೀವವಿರುವುದನ್ನು ಜೀವವಿಲ್ಲದರೊಳಗಿಂದ ತೆಗೆಯುತ್ತಾನೆ. ಜೀವ ಇಲ್ಲದ್ದನ್ನು ಜೀವವಿರುವುದರೊಳಗಿಂದ ತೆಗೆಯುವವನು ಆತನೇ. ಆತನೇ ದೇವರು (ಅಲ್ಲಾಹ್) ಮತ್ತೆ ಹಾಗಿರುವಾಗ ನೀವು (ಸತ್ಯದಿಂದ) ಯಾವಕಡೆ ಮರಳಿ ಹೋಗುತ್ತಿದ್ದೀರ."** ಈ ವಾಕ್ಯವನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು? ಯಾರಾದರೂ ಇದನ್ನು ಕುರಿತು ಕೇಳಿದರೆ ನಾನು ಏನೆಂದು ವಿವರಿಸಬೇಕು?

**ಮುಸ್ಲಿಮ್ ಹಿರಿಯರು :–** ಈ ವಿಷಯ ಏನೂ ದೊಡ್ಡದಲ್ಲ ಅಲ್ಲವೆ! ಸುಲಭವಾಗಿ ವಿವರವನ್ನು ಹೇಳಬಹುದು. ಮಾವಿನ ಚಿಪ್ಪೆಯನ್ನಾಗಲೀ, ತೆಂಗಿನ ಚಿಪ್ಪೆಯನ್ನಾಗಲೀ ಸೀಳಿಸಿ ಅದನ್ನು ದೇವರು ಮೊಳಕೆಯೊಡಿಸುತ್ತಿದ್ದಾನೆ. ಹಾಗೇ ಚಿಪ್ಪೆಯಿಲ್ಲದ ಬೀಜವನ್ನು ಸೀಳಿಸಿ ಮೊಳಕೆಯನ್ನು ಹೊರಕ್ಕೆ ದೇವರೇ ತರುತ್ತಿದ್ದಾನೆ. ಇದು ಎಲ್ಲರಿಗೂ ತಿಳಿದ ವಿಷಯವೇ. ಇನ್ನು ಜೀವವಿರುವ ಕೋಳಿ ಮರಿಗಳನ್ನು ಅಥವಾ ಪಕ್ಷಿ ಮರಿಗಳನ್ನು ಜೀವವಿಲ್ಲದ ಮೊಟ್ಟೆಯಿಂದ ದೇವರೇ ಹೊರಗೆ ತೆಗೆಯುತ್ತಿದ್ದಾನೆ. ಹಾಗೇ ಜೀವವಿಲ್ಲದ ಮೊಟ್ಟೆಯನ್ನು ಜೀವವಿರುವ ಕೋಳಿಯಿಂದ

ತೆಗೆಯುತ್ತಿದ್ದಾನೆ. ಇದರಲ್ಲಿ ಅರ್ಥವಾಗದಿರುವುದು ಏನೂ ಇಲ್ಲ. ಆದ್ದರಿಂದ ಈ ವಾಕ್ಯಕ್ಕೆ ಸುಲಭವಾಗಿ ಉತ್ತರವನ್ನು ಹೇಳಬಹುದು.

**ನಾನು :–** ಈ ವಾಕ್ಯಕ್ಕೆ ನಾನು ಇದಕ್ಕೂ ಮೊದಲೇ ನೀವು ಹೇಳಿದಹಾಗೇ ವಿವರಿಸಿ ಇತರರಿಗೆ ಹೇಳಿದ್ದೇನೆ. ಆದರೇ ಅವರು ಪುನಃ ಪ್ರಶ್ನೆ ಕೇಳಿದ್ದಾರೆ. ಸಂಪೂರ್ಣ ವಿವರ ಬೇಕೆಂದಿದ್ದಾರೆ. ಅವರಲ್ಲಿ ಇನ್ನೂ ಉಳಿದಿರುವ ಸಂಶಯವನ್ನು ಕುರಿತು ಕೇಳಿದ್ದಾರೆ. ಆಗ ಅವರು ಕೇಳಿರುವುದಕ್ಕೆ ಉತ್ತರವನ್ನು ಹೇಳಲಾರದೆ ಹೋಗಿದ್ದೇನೆ. ಅವರು ಏನಾದರೂ ಅನವಶ್ಯಕ ಪ್ರಶ್ನೆ ಹಾಕಿದ್ದಾರಾ ಎಂದು ನೋಡಿದರೆ ಹಾಗೂ ಸಹ ಇಲ್ಲ. ಅವರ ಪದ್ಧತಿ ಪ್ರಕಾರ ಕೇಳಬೇಕಾದ ಪ್ರಶ್ನೆಯನ್ನೇ ಕೇಳಿದ್ದಾರೆ. ಆಗ ನಾನು ಪೂರ್ತಿ ಉತ್ತರವನ್ನು ಕೊಡಲಾರದೆ ಹೋಗಿದ್ದೇನೆ. ಆಗ ನನಗೆ ಇನ್ನೂ ಖುರ್‌ಆನ್ ಕುರಿತು ಪೂರ್ತಿ ತಿಳಿಯದೆಂದು ಅರ್ಥವಾಗಿದೆ.

**ಮುಸ್ಲಿಮ್ ಹಿರಿಯರು :–** ಅವರು ಪುನಃ ಏನೆಂದು ಪ್ರಶ್ನಿಸಿದ್ದಾರೆ? ಇದರಲ್ಲಿ ಉತ್ತರ ಹೇಳಲಾರದಂತಹ ರಹಸ್ಯವೇನಿದೆ?

**ನಾನು :–** ಅವರು ಈ ವಿಧವಾಗಿ ಕೇಳಿದ್ದಾರೆ. "ದೇವರು ಸೃಷ್ಠಿಸಿದ ಸೃಷ್ಠಿ ಮೂರು ವಿಧಗಳಲ್ಲಿ ಇದೆ. ಅದರಲ್ಲಿ ಒಂದು ಉದ್ಭಿಜ. ಉದ್ಭಿಜ ಎಂದರೆ ಭೂಮಿಯಿಂದ ಹುಟ್ಟುವ ಬೀಜ ಎಂದು ಅರ್ಥ. ಭೂಮಿಯಲ್ಲಿ ಬಿದ್ದ ಬೀಜ ಸೀಳಿ ಮೊಳಕೆ ಬರುತ್ತದೆ. ಹಾಗೇ ಭೂಮಿಯಲ್ಲಿ ಹೂತಿಟ್ಟ ಚಿಪ್ಪೆಯಿಂದ ಕೂಡಿಕೊಂಡ ತೆಂಗಿನಕಾಯಾಗಲೀ, ಮಾವಿನಕಾಯಾಗಲೀ ಚಿಪ್ಪೆಯನ್ನು ಸೀಳಿಸಿಕೊಂಡು ಮೊಳಕೆ ಬರುತ್ತಿದೆ. ಈ ವಿಧವಾಗಿ ಬೀಜವನ್ನೂ, ಚಿಪ್ಪೆಯನ್ನೂ ಸೀಳಿಸಿ ಮೊಳಕೆ ಬರುವಂತೆ ಮಾಡುವವನು ದೇವರೇಯೆಂದು ನಾವು ನಂಬಬೇಕಾಗಿದೆ. ಸೃಷ್ಠಿಯನ್ನು ಸೃಷ್ಠಿಸಿದವನು ದೇವರೇ ಆದ್ದರಿಂದ ಬೀಜವನ್ನು ಚಿಪ್ಪೆಯನ್ನು ಸೀಳಿಸಿ ಮೊಳಕೆ ಬರುವಂತೆ ಮಾಡುವವನು ದೇವರೇಯೆಂದು ತಿಳಿದುಹೋಗಿದೆ. ಅದೇ ವಿಷಯವನ್ನೇ ಮಹಾಜ್ಞಾನಿ ಜಿಬ್ರಯೇಲ್ ಸಹ

ಹೇಳಿದ್ದಾನೆ. ದೇವರು ಮಾಡಿದ ಸೃಷ್ಠಿಯಲ್ಲಿ ಬಳ್ಳಿ, ಮರ, ಮಹಾವೃಕ್ಷಗಳು ಸಹಿತ ಒಂದು ವಿಧಾನದಲ್ಲಿ ಜನ್ಮಿಸಿದಾಗ, ಅಂಡಜ ಎನ್ನುವ ಎರಡನೇ ವಿಧಾನದಿಂದ ಮೊಟ್ಟೆಯಿಂದ ಹುಟ್ಟುವ ಸಮಸ್ತ ಜೀವರಾಶಿಗಳೂ ಹುಟ್ಟಿವೆಯೆಂದು ಹೇಳಬಹುದು. ಅಂಡಜ, ಪಿಂಡಜ, ಉಧ್ಭಿಜ ಎನ್ನುವ ಮೂರು ವಿಧಾನಗಳ ಸೃಷ್ಠಿಯಲ್ಲಿ ಒಂದು ಭೂಮಿಯಿಂದ ಬೀಜಗಳು ಅಥವಾ ಚಿಪ್ಪೆಗಳಿಂದ ಹುಟ್ಟುವವು ಆದಾಗ, ಎರಡನೆಯ ಸೃಷ್ಠಿ ಅಂಡದಿಂದ ಹುಟ್ಟುವವು. ಅಂಡ ಎಂದರೆ ಮೊಟ್ಟೆ ಎಂದು ಅರ್ಥ. ಅಂಡಜ ಎಂದರೆ ಮೊಟ್ಟೆಯಿಂದ ಹುಟ್ಟಿರುವವೆಂದು ಅರ್ಥ. ಮೊಟ್ಟೆಯಿಂದ ಹುಟ್ಟಿರುವವು ಪಕ್ಷಿಗಳು, ಹಾವುಗಳು, ಕಪ್ಪೆಗಳು, ಹಲ್ಲಿಗಳು ಮೊದಲಾದ ಎಷ್ಟೋ ಜಾತಿಗಳು ಇವೆ. ಪ್ರಪಂಚದಲ್ಲಿ ಭೂಮಿ ಮೇಲೆ ಅಲೆದಾಡುವವು ಆಕಾಶದಲ್ಲಿ ಹಾರಾಡುವವು ಎಷ್ಟೋ ಜೀವರಾಶಿಗಳು ಅಂಡದಿಂದ ಹುಟ್ಟಿರುವವೇ ಆಗುವುದರಿಂದ ಅವುಗಳೆಲ್ಲವನ್ನು ಅಂಡಜಗಳು ಎಂದು ಹೇಳುತ್ತಿದ್ದೇವೆ.

ದೇವರ ಸೃಷ್ಠಿಯಲ್ಲಿ ಮೂರನೆಯದು ಪಿಂಡಜ. ಪಿಂಡದಿಂದ ಹುಟ್ಟಿರುವುದನ್ನು ಪಿಂಡಜ ಎನ್ನುತ್ತೇವೆ. ಗರ್ಭ ಧರಿಸಿ ಪ್ರಸವಿಸುವವೆಲ್ಲಾ ಪಿಂಡಜಗಳೇ ಆಗುತ್ತವೆ. ಮನುಷ್ಯರು ಪ್ರಾಣಿ ಜಾತಿಗಳು ಮೊದಲಾದವೆಲ್ಲವೂ ಪಿಂಡಜಗಳಾಗುತ್ತವೆ. ಹಾಗಿರುವಾಗ ಮೇಲಿನ ವಾಕ್ಯಗಳಲ್ಲಿ ಉಧ್ಭಿಜಗಳು (ಭೂಮಿಯಲ್ಲಿ ಬೀಜದಿಂದ ಹುಟ್ಟುವವು) ಮತ್ತು ಅಂಡಜಗಳು ಇವೆ. ಮೇಲಿನ ವಾಕ್ಯಕ್ಕೆ ಉತ್ತರದಲ್ಲಿ ದೇವರ ಸೃಷ್ಠಿ ಮೂರು ವಿಧಗಳಲ್ಲಿ ಇರುವಹಾಗೆ ಜಿಬ್ರಯೇಲ್ ಹೇಳುವುದು ನಡೆದಿದೆ. ಅದರಲ್ಲಿ ಭಾಗವಾಗಿ ಜೀವವಿರುವವುಗಳನ್ನು ಜೀವವಿಲ್ಲದವುಗಳಿಂದ ತೆಗೆಯುತ್ತಾನೆ ಎಂದಾಗ ಆ ವಾಕ್ಯ ಅಂಡಜಗಳೆಲ್ಲವುಗಳಿಗೂ ಸರಿಹೋಗಿದೆ. ನಂತರ ಜೀವವಿಲ್ಲದವುಗಳನ್ನು ಜೀವವಿರುವವುಗಳಿಂದ ತೆಗೆಯುತ್ತಾನೆ ಎನ್ನುವ ಮಾತಿಗೆ ಅಂಡಜಗಳನ್ನು ಹೇಳಬಾರದು. ಉಳಿದ ಮೂರನೆಯ ಸೃಷ್ಠಿ ಆದ ಪಿಂಡಜಗಳನ್ನು ಕುರಿತೇ ಹೇಳಬೇಕಲ್ಲವೆ! ಎಂದು ಕೇಳುತ್ತಿದ್ದಾರೆ. ಒಂದು ವೇಳೆ ಮೂರನೆಯದು

ಪಿಂಡಜಗಳು ಎಂದು ಹೇಳಿದರೇ "ಪ್ರಾಣ (ಜೀವ) ಇಲ್ಲದೆ ಜೀವವಿರುವುದರಿಂದ ಹೇಗೆ ಹುಟ್ಟುತ್ತದೆಂದು" ಕೇಳುತ್ತಿದ್ದಾರೆ. ಅದಕ್ಕೆ ನೀವು ಏನನ್ನುತ್ತೀರಾ?

**ಹಿರಿಯರು :–** ಜೀವವಿರುವ ಅದರಿಂದ ಜಿವವಿಲ್ಲದ್ದು ಹುಟ್ಟುವುದೆಂದರೇ ಅದು ಜೀವವಿರುವ ಕೋಳಿಯಿಂದ ಜೀವವಿಲ್ಲದ ಮೊಟ್ಟೆ ಮಾತ್ರವೆ ಹುಟ್ಟುತ್ತಿದೆಯೆಂದು ಹೇಳಬಹುದು. ಪಿಂಡದಿಂದ ಹುಟ್ಟುವವಾದರೂ ಜೀವವಿರುವ ತಾಯಿಯಿಂದ ಜೀವವಿರುವ ಶಿಶು ಹುಟ್ಟುತ್ತಿದ್ದಾನಾದ್ದರಿಂದ, ಜೀವವಿಲ್ಲದ್ದು ಹುಟ್ಟುತ್ತಿದೆಯೆನ್ನುವ ಮಾತಿಗೆ ಸರಿಹೋಗದು. ಆದ್ದರಿಂದ ಈ ವಾಕ್ಯದಲ್ಲಿ ಭೂಮಿಯಲ್ಲಿ ಬೀಜದಿಂದ ಹುಟ್ಟುವ ಉದ್ಭಿಜಗಳ ಕುರಿತು ಮತ್ತು ಅಂಡಜಗಳ ಕುರಿತು ಮಾತ್ರವೇ ಹೇಳಿದ್ದಾನೆಂದು ತಿಳಿಯುತ್ತಿದೆ.

**ನಾನು :–** ದೇವರ ಸೃಷ್ಠಿ ಎರಡು ವಿಧಗಳಾ ಅಥವಾ ಮೂರು ವಿಧಗಳಾ ನೀವೇ ಹೇಳಿ.

**ಹಿರಿಯರು :–** ವಾಸ್ತವ ಹೇಳಬೇಕೆಂದರೆ ದೇವರ ಸೃಷ್ಠಿ ಮೂರು ವಿಧಗಳೆಂದು ಹೇಳಬೇಕು.

**ನಾನು :–** ಹಾಗಿರುವಾಗ ದೇವರು ತನ್ನ ಸೃಷ್ಠಿಯನ್ನು ಕುರಿತು ಯಾವಾಗ ಹೇಳಿದರೂ ಇರುವ ಮೂರು ವಿಧಾನಗಳನ್ನು ಹೇಳುತ್ತಾನಾಗಲೀ, ಎರಡು ವಿಧಾನಗಳು ಮಾತ್ರವೇ ಏಕೆ ಹೇಳುತ್ತಾನೆ? ವಾಕ್ಯವನ್ನು ನೋಡಿದರೇ ವಾಕ್ಯ ಮೂರು ಭಾಗಗಳಾಗಿ ಇದೆ. ಆದ್ದರಿಂದ ದೇವರು ತನ್ನ ಮೂರು ವಿಧಗಳ ಸೃಷ್ಠಿಯನ್ನು ತಿಳಿಸಿದ್ದಾನೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಆದ್ದರಿಂದ ಮೂರನೆಯ ವಿಧಾನವನ್ನು ವಿವರಿಸಿ ಹೇಳಿ.

**ಹಿರಿಯರು :–** ಜೀವವಿರುವ ಅದರಿಂದ ಜೀವವಿಲ್ಲದ ಮೊಟ್ಟೆಯೇ ಹುಟ್ಟುತ್ತದೆ. ಆದ್ದರಿಂದ ಆ ವಾಕ್ಯ ಮೂರನೆಯ ಭಾಗಕ್ಕೆ ಸರಿಹೋಗುತ್ತದೆ ಅಲ್ಲವೆ!

**ನಾನು :–** ಹಾಗೆ ಸರಿಮಾಡಿಕೊಳ್ಳುವವರನ್ನು ಹೆಚ್ಚರಿಸುತ್ತಾ ನೀವು ಸತ್ಯದಿಂದ ಯಾವ ಕಡೆ ಮರಳಿ ಹೋಗುತ್ತಿದ್ದೀರೆಂದು ಕೊನೆಯಲ್ಲಿ ಹೇಳುವುದು ನಡೆದಿದೆ.

ಆದ್ದರಿಂದ ಈ ಆಯತ್‌ನ್ನು ಕುರಿತು ನೀವು ಆಲೋಚಿಸಿ ವಿವರವಾಗಿ ಹೇಳಿರಿ. ಈ ವಾಕ್ಯದಲ್ಲಿ ಯಾವುದೋ ನಿಗೂಢವಾದ ರಹಸ್ಯವಿರುವುದರಿಂದ ನೀವು ಯಾವ ಕಡೆ ಹೋಗುತ್ತಿದ್ದೀರೆಂದು ಹೇಳುವುದು ಸಹ ನಡೆದಿದೆ. ಈ ವಾಕ್ಯ ದೇವರ ಸೃಷ್ಠಿ ಮೂರು ವಿಧಗಳಲ್ಲಿ ಇದೆಯೆಂದು ತಿಳಿಸುವುದಕ್ಕೇ ಎಂದು ನಾನು ನಂಬುತ್ತಿದ್ದೇನೆ. ಆದರೇ ಜೀವ ಇಲ್ಲದ್ದು ಜೀವವಿರುವುದು ಎನ್ನುವ ಪದಗಳು ನಮಗೆ ಅರ್ಥವಾಗದೆ ಇರುವುದರಿಂದ ನಿಮ್ಮನ್ನು ಕೇಳುತ್ತಿದ್ದೇನೆ. ಈ ವಾಕ್ಯಕ್ಕೆ ನೀವು ಸರಿಯಾದ ಉತ್ತರ ಹೇಳುವುದಾದರೆ ನಾನು ನೀವು ಹೇಳಿದಹಾಗೆ ಮುಸ್ಲಿಮ್ ಮತದೊಳಕ್ಕೆ ಬದಲಾಗಬಲ್ಲೆನು. ಈ ವಾಕ್ಯಕ್ಕೆ ಈಗಲೆ ವಿವರ ಹೇಳದೇ ಹೋದರೂ, ಒಂದು ತಿಂಗಳು ಸಮಯ ತೆಗೆದುಕೊಂಡು ನಂತರವಾದರೂ ಹೇಳಿದರೇ, ಆಗಲೇ ನಾನು ನನ್ನ ಮತವನ್ನು ಬಿಟ್ಟು ನಿಮ್ಮ ಮತದೊಳಕ್ಕೆ ಬರಬಲ್ಲೆನು. ಇದಕ್ಕೆ ನೀವೇನು ಹೇಳುತ್ತೀರಾ?

**ಹಿರಿಯರು :–** ಖುರ್‌ಆನ್ ಗ್ರಂಥದಲ್ಲಿನ ಜ್ಞಾನ ಸಮುದ್ರವಂತಹದು. ಅದಕ್ಕೆ ಅಂತ್ಯವೇ ಇಲ್ಲ. ಆದ್ದರಿಂದ ಅದರಲ್ಲಿನ ಎಲ್ಲ ವಿಷಯಗಳು ಪೂರ್ತಿಯಾಗಿ ನಮಗೂ ಸಹ ತಿಳಿದಿದೆಯೆಂದು ನಾವು ಹೇಳಲಾರೆವು. ಈ ವಿಷಯದಲ್ಲಿ ನಮಗಿಂತ ಹೆಚ್ಚಾಗಿ ತಿಳಿದವರು ಇರಬಹುದು. ಅಂಥವರು ಖುರ್‌ಆನ್‌ನಲ್ಲಿನ ಎಲ್ಲ ವಾಕ್ಯಗಳಿಗೂ ಪೂರ್ತಿ ವಿವರವನ್ನು ಬರೆದು ನೆಟ್‌ನಲ್ಲಿ ಇಟ್ಟಿರುತ್ತಾರೆ. ಆದ್ದರಿಂದ ತಿಂಗಳ ಒಳಗೆ ಇಂಟರ್‌ನೆಟ್‌ನಲ್ಲಿ ಇರುವ ವಿವರಗಳೆಲ್ಲವು ನೋಡಿ, ನಿಮಗೆ ಈ ವಾಕ್ಯಕ್ಕೆ ಸರಿಯಾದ ವಿವರವನ್ನು ಹೇಳಬಲ್ಲೆವು.

**ನಾನು :–** ಸರಿ ನಾನು ದೇವರ ಜ್ಞಾನ ಎಲ್ಲಿ ಚೆನ್ನಾಗಿ ಅರ್ಥವಾಗಬಲ್ಲದೊ ಆ ಮತದೊಳಕ್ಕೆ ತಪ್ಪದೆ ನಾನು ಬರಬಲ್ಲೆನು. ಆದ್ದರಿಂದ ನಾನು ಮತ ಬದಲಾಗುವುದಕ್ಕೆ ನಿಮ್ಮದೆ ಆಲಸ್ಯ.

(ಆದರೇ ಸುಮಾರು ಎರಡು ಸಂವತ್ಸರಗಳಿಂದ ಅವರು ಆ ವಾಕ್ಯಕ್ಕೆ ವಿವರವನ್ನು ಹೇಳಲಿಲ್ಲ. ನಾನು ನನ್ನ ಮತವನ್ನು ಬಿಟ್ಟು ಮುಸ್ಲಿಮ್ ಮತದೊಳಕ್ಕೆ

ಹೋಗಲಿಲ್ಲ. ನಾನು ಕುರುಡನಂತೆ ನನ್ನ ಮತ ಬದಲಾಗಲಿಲ್ಲ. ಅವರು ನೇರವಾಗಿ ಆ ವಾಕ್ಯಕ್ಕೆ ವಿವರವನ್ನೂ ಹೇಳಲಿಲ್ಲ.)

ಖುರ್‌ಆನ್ ಗ್ರಂಥದಲ್ಲಿ ಸೃಷ್ಠಿ ರಹಸ್ಯ ಮೂರು ವಿಧಗಳಾಗಿ ಇದೆಯೆಂದು, ಆ ಮೂರು ಅಂಡಜ, ಪಿಂಡಜ, ಉದ್ಭಿಜವೆಂದು ತಿಳಿಸಿರುವಾಗ, ಆ ವಿವರವನ್ನು ಪೂರ್ತಿ ಇಲ್ಲಿಯವರೆಗು ಯಾರಿಗೂ ತಿಳಿಯದೆಂದೇ ಹೇಳಬಹುದು. ಏಕೆಂದರೆ! ಒಂದು ಕಡೆ ಮರಣಸಿದ್ಧಾಂತವನ್ನು ಮತ್ತೊಂದು ಕಡೆ ಜನನ ಸಿದ್ಧಾಂತವನ್ನು ತಿಳಿದವರಿಗೇ ಆ ವಾಕ್ಯ ಅರ್ಥವಾಗುತ್ತದೆ. ಭೌತಿಕ ಶಾಸ್ತ್ರದಲ್ಲಿ ಸಾವಿರ ಸಂವತ್ಸರಗಳು ಪರಿಶೋಧನೆ ಮಾಡಿದರೂ ತಿಳಿಯದ ರಹಸ್ಯ ಆ ವಾಕ್ಯದಲ್ಲಿ ಇದೆ. ಈ ದಿನ ವಿಜ್ಞಾನಿಗಳೆನ್ನುವವರೆಲ್ಲರೂ ಜನನ ಸಿದ್ಧಾಂತಕ್ಕೆ ವಿರುದ್ಧ ಭಾವನೆಹೊಂದಿ ಖುರ್‌ಆನ್‌ನಲ್ಲಿನ ವಾಕ್ಯಕ್ಕೆ ಬಹಳ ದೂರ ಹೋಗಿದ್ದಾರೆ. ನಾವು 1980ನೇ ವರ್ಷದಲ್ಲೇ ಈ ವಾಕ್ಯಕ್ಕೆ ಸಂಬಂಧಿಸಿದ ವಿವರವನ್ನು ಕೊಡುವ **"ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥ ರೂಪವನ್ನು ಬರೆದು ಕೊಟ್ಟಿದ್ದೇವೆ. ಆದರೇ ನನ್ನ ಸಿದ್ಧಾಂತವನ್ನು ಭೌತಿಕಶಾಸ್ತ್ರಜ್ಞರು ಭೌತಿಕವನ್ನು ತಿಳಿದ ಡಾಕ್ಟರ್‌ಗಳು ಎಲ್ಲರೂ ವಿರೋಧಿಸಿದ್ದಾರೆ. ನನ್ನ ಸಿದ್ಧಾಂತವನ್ನು ವಿರೋಧಿಸಿದವರೆಲ್ಲರೂ ಪುನಃ ನನ್ನ ಸಿದ್ಧಾಂತವೇ ಸರಿಯಾದದ್ದೆಂದು ಒಪ್ಪಿಕೊಳ್ಳುವವರೆಗು ಖುರ್‌ಆನ್ ಗ್ರಂಥದಲ್ಲಿನ ಆರನೆಯ ಸೂರಾ, 95ನೇ ಆಯತ್‌ವೊಂದರ ವಿವರ ತಿಳಿಯದು. ಏಕೆಂದರೆ! ನಾನು ಇಲ್ಲಿ ಬರೆದಿರುವುದೇ ಅಲ್ಲಿ ಬರೆಯಲಾಗಿದೆ. ಅಲ್ಲಿ ಇರುವುದೇ ನಾನು ಇಲ್ಲಿ ಗ್ರಂಥದಲ್ಲಿ ಬರೆದಿದ್ದೇನೆ. ನಾನು ಬರೆದಿರುವುದು ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ ಇರುವ 22ನೇ ಶ್ಲೋಕಕ್ಕೆ ವಿವರ. ಅದೇ ಆರನೆಯ ಸೂರಾ 95ನೇ ವಾಕ್ಯಕ್ಕೆ ವಿವರವಾಗಿದೆ. ಇಲ್ಲಿ ಮತಗಳು ಬೇರೆ ಗ್ರಂಥಗಳು ಬೇರೆಯೆಂದುಕೊಂಡರೇ ಯಾರಿಗೂ ಏನೂ ಅರ್ಥವಾಗುವುದಿಲ್ಲ. ಮತ ಬೇರೆಯಾದರೂ ಗ್ರಂಥ ಬೇರೆ ಅಲ್ಲ. ದೇವರು ಬೇರೆ ಅಲ್ಲ ಎಂದು ತಿಳಿಯುವುದಾದರೇ ಖುರ್‌ಆನ್‌ನಲ್ಲಿ ಯಾವ ವಾಕ್ಯಕ್ಕಾದರೂ ವಿವರ ತಿಳಿಯಬಲ್ಲದು. ಇಲ್ಲದೇ ಹೋದರೇ ಬಹಳ ವಾಕ್ಯಗಳಿಗೆ ಅಸಲಾದ

ಭಾವನೆ ತಿಳಿಯದು. ಕೆಲವು ವಾಕ್ಯಗಳಿಗೆ ವಿವರ ಇಂದಿನವರೆಗು ತಿಳಿಯದಂತೆ ಹೋಗುವುದಕ್ಕೆ ಕಾರಣ ಅದೇಯೆಂದು ತಿಳಿಯಬೇಕು.

ಸರ್ವ ಪ್ರಪಂಚಕ್ಕೂ ದೇವರು ಒಬ್ಬನೇ ಎನ್ನುವ ಮಾತನ್ನು ಮರೆತು, ಆತನ ಜ್ಞಾನ ಒಂದೇ ಎಂದು ಮರೆತು, ದೈವ ಗ್ರಂಥ ಯಾವುದಾದರೂ ದೇವರನ್ನೇ ತಿಳಿಸುವುದಕ್ಕೆ ಹುಟ್ಟಿರುವುದೆಂದು ಮರೆತು, ಗ್ರಂಥಗಳು ಬೇರೆ, ದೇವರು ಬೇರೆ ಮತ ಬೇರೆ ಎಂದುಕೊಳ್ಳುವವನು ಯಾವ ಮತದಲ್ಲಿದ್ದರೂ, ಅವನಿಗೆ ದೇವರ ಜ್ಞಾನ ಸಂಪೂರ್ಣವಾಗಿ ತಿಳಿಯದು. ನಾನು ದೇವರ ಭಕ್ತನು, ದೇವರನ್ನು ವಿಶ್ವಾಸಿಸಿದವನನ್ನು ಎಂದು ಹೇಳಿಕೊಂಡರೂ, ಅವನಿಗೆ ದೇವರು ಎಂತಹವನೋ ತಿಳಿಯದು. ಯಾವ ಮತದಲ್ಲಾದರೂ ಮತ ಹಿರಿಯರಿದ್ದರೇ ಅವರಿಗೆ ಮತವನ್ನು ಕುರಿತು ತಿಳಿಯುತ್ತದಾಗಲೀ, ದೇವರನ್ನು ಕುರಿತು ತಿಳಿದಿಲ್ಲ. ಮತವನ್ನು ಆಧಾರ ಮಾಡಿಕೊಂಡು ದೇವರನ್ನು ತಿಳಿಯುಬಹುದೆಂದುಕೊಳ್ಳುವುದು ನಾಯಿ ಬಾಲ ಹಿಡಿದುಕೊಂಡು ಗೋದಾವರಿಯನ್ನು ದಾಟಬಹುದೆಂದು ಕೊಂಡಂತಾಗುತ್ತದೆ. ದೇವರು ಮತಕ್ಕೆ ಅತೀತನು. ಆದ್ದರಿಂದ ಮತದಿಂದಾಗಲೀ, ಮತಾಚರಣೆಗಳಿಂದಾಗಲೀ ದೇವರು ತಿಳಿಯುವುದಿಲ್ಲ. ಮಾಯೆಯಿಂದ (ಸಾತಾನ್‌ನಿಂದ) ಹುಟ್ಟಿರುವುದು ಮತ ಮತ್ತು ಮತಾಚರಣೆಗಳು. ಆದ್ದರಿಂದ ಮತವನ್ನಾಗಲೀ, ಮತಾಚರಣೆಗಳನ್ನಾಗಲೀ ದೊಡ್ಡದಾಗಿ ಹೇಳಿಕೊಳ್ಳುವವನು ಮಾಯೆಗೆ ಹತ್ತಿರವಾಗಿ, ದೇವರಿಗೆ ದೂರವಾಗಿ ಇರುತ್ತಾನೆ.

ದೇವರ ಜ್ಞಾನವನ್ನು ತಿಳಿದವನು ಯಾರೇಯಾಗಲೀ ಮತವನ್ನು ಮುಖ್ಯವಾಗಿ ತೆಗೆದುಕೊಳ್ಳುವುದಿಲ್ಲ. ದೇವರ ಜ್ಞಾನವನ್ನು ತಿಳಿಯದವರೇ ಮತದ ಮೇಲೆ ಆಸಕ್ತಿ ಹೊಂದಿರುತ್ತಾರೆ. ಮತದ ಮೇಲೆ ಆಸಕ್ತಿ ಇರುವವರೇ ಮತ ಪ್ರಚಾರ ಮಾಡಬೇಕೆಂದು ಅಂದುಕೊಳ್ಳುತ್ತಾರೆ. ಮತ ಪ್ರಚಾರದಿಂದಲೇ ದೇವರಿಗೆ ಹತ್ತಿರವಾಗುವೆವೆಂದು, ದೇವರ ಸೇವೆ ಮಾಡಿದವರಾಗುತ್ತೇವೆಂದು ಅಂದುಕೊಳ್ಳುತ್ತಿರುವರು. ಅಂತಹವರೇ ಪೂರ್ತಿ ಶ್ರದ್ಧೆಯಿಂದ ಮತವನ್ನು

ಪ್ರಚಾರ ಮಾಡಿ ಮತವ್ಯಾಪ್ತಿ ಮಾಡಬೇಕೆಂದುಕೊಳ್ಳುತ್ತಿರುವರು. ಅವರಲ್ಲಿನ ಮುಖ್ಯ ಉದ್ದೇಶವೇ ಮತ ಪ್ರಚಾರವಾಗಿರುವುದರಿಂದ, ಅವರ ಕ್ರಿಯೆಗಳೆಲ್ಲವೂ ಮತವನ್ನು ವ್ಯಾಪ್ತಿ ಮಾಡುವವಾಗಿ, ಅವರ ಬೋಧನೆ ಎಲ್ಲವೂ ಮತ ಪ್ರಚಾರವನ್ನು ಮಾಡುವುದಾಗಿ ಇರುತ್ತದೆ. ಇತರರನ್ನು ಪ್ರಲೋಭವಿಟ್ಟು ತಮ್ಮ ಮತದೊಳಕ್ಕೆ ಬರುವಹಾಗೆ ಮಾಡುವುದು ಸಹ ಅವರ ಕ್ರಿಯೆಗಳಲ್ಲಿ ಒಂದು ಭಾಗವೇ. ತಮ್ಮ ದೇವರೇ, ತಮ್ಮ ಜ್ಞಾನವೇ ದೊಡ್ಡದೆಂದು ಹೇಳಿಕೊಳ್ಳುವುದು ಅವರ ಬೋಧನೆಗಳಲ್ಲಿ ಭಾಗವಾಗಿರುತ್ತದೆ. ಅಂಥವರು ಯಾವ ಮತದಲ್ಲಿ ಹುಟ್ಟಿದ್ದರೂ, ಅವರು ಮತವನ್ನು ಕುರಿತು ಪ್ರಚಾರ ಮಾಡುವುದೇ ಮುಖ್ಯ ಕಾರ್ಯವಾಗಿ ಇಟ್ಟುಕೊಂಡಿರುತ್ತಾರೆ. ಆ ವಿಧವಾದ ಮತ ಪ್ರಚಾರಗಳು ಕ್ರೈಸ್ತರು ಹೆಚ್ಚಾಗಿ, ಮುಸ್ಲಿಮ್‌ರು ಕಡಿಮೆಯಾಗಿ ಮಾಡುತ್ತಿರುವುದು ಕಾಣಿಸುತ್ತಲೇ ಇದೆ. ಆದರೇ ಹಿಂದೂಗಳು ಸಹ ತಮ್ಮ ಮತ ಹಿಂದೂಮತವೆಂದು ಹೇಳಿಕೊಂಡಾಗ, ಅವರ ಮತವನ್ನು ಕುರಿತು ಎಲ್ಲರಹಾಗೆ ಏಕೆ ಪ್ರಚಾರ ಮಾಡಲಾರದೇ ಹೋಗುತ್ತಿದ್ದಾರೆ? ಕ್ರೈಸ್ತರ ಹಾಗೆ ಹಿಂದೂ ಮತವನ್ನು ಏಕೆ ವ್ಯಾಪ್ತಿ ಮಾಡಲಾರದೆ ಹೋಗುತ್ತಿದ್ದಾರೆನ್ನುವ ಪ್ರಶ್ನೆ ಸಹ ಇಲ್ಲಿ ಬರಬಲ್ಲದು. ಆದರೇ ಅದಕ್ಕೆ ಸರಿಯಾದ ಉತ್ತರವನ್ನು ಹೇಳಿಕೊಂಡರೇ, ಕ್ರೈಸ್ತರಿಗೆ ಅವರ ಬೈಬಲ್ ಗ್ರಂಥವನ್ನು ಕುರಿತು ತಿಳಿದಹಾಗೆ, ಮುಸ್ಲಿಮ್‌ರಿಗು ಅವರ ಖುರ್‌ಆನ್ ಗ್ರಂಥವನ್ನು ಕುರಿತು ತಿಳಿದಹಾಗೆ, ಹಿಂದೂಗಳಿಗೆ ಅವರ ಭಗವದ್ಗೀತೆ ಗ್ರಂಥ ಕುರಿತು ತಿಳಿಯದಿರುವುದೇ ಮುಖ್ಯ ಕಾರಣವೆಂದು ಹೇಳಬಹುದು. ಅಷ್ಟೇ ಅಲ್ಲದೆ ಮುಸ್ಲಿಮ್‌ರಿಗು ಖುರ್‌ಆನ್ ಗ್ರಂಥ, ಕ್ರೈಸ್ತರಿಗೆ ಬೈಬಲ್ ಗ್ರಂಥವಿದ್ದಹಾಗೆ ಹಿಂದೂಗಳಿಗು ಭಗವದ್ಗೀತೆ ಗ್ರಂಥವಿದೆಯೆನ್ನುವ ವಿಷಯವೂ ಸಹ ಬಹಳ ಜನ ಹಿಂದೂಗಳಿಗೆ ತಿಳಿದಿಲ್ಲ.

ಆದ್ದರಿಂದ ಹಿಂದೂಗಳಲ್ಲಿ ಬಹಳ ಜನರಿಗೆ ಹಿಂದೂ ಧರ್ಮವೇ ತಿಳಿದಿಲ್ಲವೆಂದು ಹೇಳಬಹುದು. "ಇಂದೂ" ಎಂಬ ಶಬ್ಧವನ್ನು ಹಿಂದೂ ಶಬ್ಧವಾಗಿ ಹೇಳುತ್ತಾ ಹಿಂದೂ ಶಬ್ಧಕ್ಕೆ, ಇಂದೂ ಶಬ್ಧಕ್ಕೆ ಅರ್ಥ ತಿಳಿಯದ ಸ್ಥಿತಿಯಲ್ಲಿ ಇಂದಿನ ಹಿಂದೂಗಳಿದ್ದಾರೆ. ಕೆಲವರು ಹಿಂದೂಗಳು ತಾವು ಹಿಂದೂ

ಮತ ರಕ್ಷಕರೆಂದು ಹೇಳಿಕೊಳ್ಳುತ್ತಾ, ಇತರರ ಮೇಲೆ ಅವರ ಹಿರೆತನವನ್ನು ಚಲಾಯಿಸುತ್ತಿದ್ದಾರೆ ಹೊರತು, ಅವರಿಗೆ ಹಿಂದೂ (ಇಂದೂ) ಧರ್ಮಗಳಾವುವೊ ಸ್ವಲ್ಪವಾದರೂ ತಿಳಿದಿಲ್ಲ. ಹಿಂದೂ ಧರ್ಮಗಳನ್ನು ತಿಳಿಯದವರು ಹಿಂದೂತ್ವವನ್ನು ರಕ್ಷಿಸಬಲ್ಲರಾ? ರಕ್ಷಿಸಲಾರರೆಂದೇ ಹೇಳಬಹುದು. ಆದ್ದರಿಂದ ಎಷ್ಟು ಜನ ಹಿಂದೂ ರಕ್ಷಕರು ತಯಾರಾದರೂ, ಎಷ್ಟೋ ಹಿಂದೂ ಮತರಕ್ಷಣೆ ಸಂಘಗಳು ತಯಾರಾದರೂ, ಹಿಂದೂಮತ ಕ್ಷೀಣಿಸುವುದನ್ನು ನಿಲ್ಲಿಸಲಾರದೆ ಹೋಗುತ್ತಿದ್ದಾರೆ. ಯಥಾವಿಧಿಯಾಗಿ ಹಿಂದೂಗಳು ಇತರ ಮತಗಳೊಳಗೆ ಹೋಗುತ್ತಲೆ ಇದ್ದಾರೆ. ಕೆಲವರು ಹಿಂದೂಗಳು ಸೈನಿಕ ಸಂಘಗಳು ತಯಾರಾದಹಾಗೆ ತಯಾರಾಗಿ, ತಮ್ಮ ಮತವನ್ನು ರಕ್ಷಿಸಿಕೊಳ್ಳುವುದಕ್ಕೆ ಇತರ ಮತಗಳ ಮೇಲೆ ದಾಳಿಗಳು ಮಡುತ್ತಿದ್ದಾರೆ. ದಾಳಿಗಳು ಮಾಡುವುದೇ ಒಳ್ಳೆಯ ಪದ್ಧತಿ ಎಂದುಕೊಂಡಿದ್ದಾರೆ. ದಾಳಿಗಳು ಮಾಡಿದರೆ ಮತ ಮಾರ್ಪಾಟುಗಳು ಕಡಿಮೆ ಆಗುತ್ತವೆಂದುಕೊಳ್ಳುತ್ತಾರೆ. ಆದರೂ ಎಷ್ಟು ದಾಳಿಗಳು ಮಾಡಿದರೂ ಎರಡು ಪಟ್ಟು ಮತ ಮಾರ್ಪಾಟು ನಡೆಯುತ್ತಿದೆಯಾಗಲೀ, ಯಾರೂ ಭಯಪಟ್ಟು ಮತ ಬದಲಾಗದಂತೆ ಇರಲಿಲ್ಲ. ಹಿಂಸೆಯಿಂದ ಏನೂ ಸಾಧಿಸಲಾರೆವೆಂದು ತಿಳಿಯದ ಹಿಂಸಾವಾದಿಗಳು, ಹಿಂದೂಮತಕ್ಕೆ ಕೆಟ್ಟ ಹೆಸರು ತರುತ್ತಿದ್ದಾರೆ ಹೊರತು ಮತ ಮಾರ್ಪಾಟನ್ನು ನಿರೋಧಿಸಲಾರದೆ ಹೋಗಿದ್ದಾರೆ. ಮತ ಎನ್ನುವುದು ಇಷ್ಟದ ಮೇಲೆ ಆಧಾರಪಟ್ಟಿರುತ್ತದೆಂದೂ, ಬಲಪ್ರಯೋಗದ ಮೇಲೆ ಆಧಾರವಾಗಿಲ್ಲವೆಂದು ತಿಳಿಯದವರು, ಎಷ್ಟು ಹಿಂಸಾಯುತವಾಗಿ ಪ್ರವರ್ತಿಸಿದರೂ, ಅದರಿಂದ ಏನೂ ಪ್ರಯೋಜನ ಇಲ್ಲದೇ ಹೋಗುವುದಲ್ಲದೆ, ಹೊಸದಾಗಿ ಶತ್ರುಗಳನ್ನು ಸಂಪಾದಿಸಿಕೊಂಡಂತಾಗುತ್ತದೆ. ಹಿಂದೂ ಧರ್ಮಗಳು ತಿಳಿಯದ ಹಿಂದೂಗಳು ಮತ ಪ್ರಚಾರವನ್ನು ಜ್ಞಾನದಿಂದ ಬೋಧಿಸಲಾರದೆ ಹೋಗುತ್ತಿದ್ದಾರೆ. ಕ್ರೈಸ್ತರು, ಮುಸ್ಲಿಮ್‌ರು ಮತ ಪ್ರಚಾರದಲ್ಲಿ ಅನುಸರಿಸುವ ಧೋರಣೆಯನ್ನು ಸ್ವಲ್ಪವಾದರೂ ಅನುಸರಿಸದೇ, ಮತ ಪ್ರಚಾರವನ್ನು ಮಾಡಿಕೊಳ್ಳಲಾರದೆ ಹೋಗುತ್ತಿದ್ದಾರೆ. ಮತ ಪ್ರಚಾರ ತಿಳಿಯದ ಕೆಲವರು, ದಾಳಿಗಳು ದೌರ್ಜನ್ಯಗಳು ಮಾಡಿ ಮತ ರಕ್ಷಣೆ ಮಾಡಬೇಕೆಂದುಕೊಂಡರೂ, ಅದರಿಂದ ಎಂತಹ ಪ್ರಯೋಜನವೂ

ಇಲ್ಲ. ನಡೆಯಬೇಕಾಗಿರುವ ನಷ್ಟ ನಡೆದುಹೋಗುತ್ತಲೇ ಇದೆ. ಹಿಂದೂಗಳಲ್ಲಿ ಕೆಲವು ಸಂಸ್ಥೆಗಳು ಹಿಂಸಾ ಮಾರ್ಗವನ್ನು ಅನುಸರಿಸುವುದರಿಂದ, ಇತರ ಮತದವರು ಸಹ ಹಿಂದೂಮತದ ಮೇಲೆ ಅದೇ ಪ್ರಯೋಗ ಮಾಡುತ್ತಿದ್ದಾರೆ. ಇತರ ಮತದವರು ಮಾಡುವ ಹಿಂಸೆಯಿಂದ ಅಮಾಯಕ ಪ್ರಜೆಗಳು ಎಷ್ಟೋ ಜನ ನಷ್ಟವಾಗಬೇಕಾಗಿ ಬಂದಿದೆ. ಈ ಮಧ್ಯೆ ಹೈದರಾಬಾದ್‌ನಲ್ಲಿ ನಡೆದ ಗೋಕುಲ್‌ಚಾಟ್ ಬಾಂಬು ಸ್ಫೋಟವಾಗಲಿ, ಲುಂಬಿನಿ ಪಾರ್ಕ್ ಲೇಜರ್‌ಷೋದಲ್ಲಿ ನಡೆದ ಬಾಂಬು ಸ್ಫೋಟವಾಗಲೀ, ದಿಲ್‌ಸುಖ್‌ನಗರ್‌ದಲ್ಲಿ ನಡೆದ ಸೈಕಲ್ ಬಾಂಬು ಸ್ಫೋಟಗಳಾಗಲೀ, ಹಿಂದೂಗಳ ಮೇಲೆ ಇತರರು ಮಾಡಿದ ದಾಳಿಗಳಾಗಿ ತಿಳಿಯಬಹುದು. ಇಂತಹ ಸಂಘಟನೆಗಳಿಂದ ಹಿಂದೂಗಳೇ ಹೆಚ್ಚಾಗಿ ನಷ್ಟವಾಗುತ್ತಿದ್ದಾರೆ. ಆದ್ದರಿಂದ ಹಿಂಸೆಯಿಂದ ಯಾರೂ ಏನೂ ಸಾಧಿಸಲಾರೆವೆಂದು, ಸಾಮರಸ್ಯದಿಂದ ಯಾವುದನ್ನಾದರೂ ಸಾಧಿಸಬಹುದೆಂದು ತಿಳಿಯಬೇಕು.

ಮತ ಪ್ರಚಾರದಲ್ಲಿ ಹಿಂದೂಮತ ಪೂರ್ತಿ ಹಿಂದುಳಿಯುವುದಕ್ಕೆ ಕಾರಣ ಇತರ ಮತದವರಿಗೆ ಅವರ ಗ್ರಂಥಗಳ ಮೇಲೆ ಪಟುತ್ವವಿರುವಹಾಗೆ, ಹಿಂದೂಗಳಿಗೆ ಭಗವದ್ಗೀತೆ ಮೇಲೆ ಯಾವ ಮಾತ್ರ ಪರಿಚಯವಾಗಲೀ, ಪಟುತ್ವವಾಗಲೀ ಇಲ್ಲ. ಹಿಂದೂಗಳ ಮೂಲ ಗ್ರಂಥ ಭಗವದ್ಗೀತೆಯೆಂದು ಬಹಳ ಜನ ಹಿಂದೂಗಳಿಗೇ ತಿಳಿದಿಲ್ಲ. ಒಂದುವೇಳೆ ತಿಳಿದಂತಹ ಜ್ಞಾನಿಗಳು ಹಿಂದೂಗಳ ಗ್ರಂಥ ಭಗವದ್ಗೀತೆಯೆಂದು ಹೇಳಿದರೂ, ಕೆಲವರು ಕೇಳುವ ಸ್ಥಿತಿಯಲ್ಲಿಲ್ಲ. ಹಿಂದೂಮತದಲ್ಲಿ ತಮ್ಮ ಹಿರೆತನವನ್ನು ಚೆಲಾಯಿಸಬೇಕೆಂದು ಅಂದುಕೊಳ್ಳುವ ಕೆಲವರು, ಹಿಂದೂಗಳ ಗ್ರಂಥ ಭಗವದ್ಗೀತೆ ಅಲ್ಲವೆಂದು, ವೇದಗಳೆಂದು ಪ್ರಚಾರ ಮಾಡಿದ್ದಾರೆ. ಅದರಿಂದ ಬಹಳ ಜನ ಪಂಡಿತರಾದವರೆಲ್ಲರೂ ವೇದಗಳ ಹಿಂದೆ ಬಿದ್ದು ಅವುಗಳನ್ನು ಓದಿ ವೇದಾಂತಿಗಳೆಂದು ಹೆಸರು ತಂದುಕೊಂಡಿದ್ದಾರೆ. ವೇದಾಂತಕ್ಕಿಂತ ದೈವಜ್ಞಾನ ದೊಡ್ಡದೆಂದು, ವೇದಗಳಿಗಿಂತ ಭಗವದ್ಗೀತೆ ದೊಡ್ಡದೆಂದು ಅವರಿಗೆ ತಿಳಿಯದಂತೆ

ಹೋಗಿದೆ. ಅವರಿಗೆ ತಿಳಿಯದಂತೆ ಹೋಗುವುದಲ್ಲದೆ ಬಹಳ ಜನರಿಗೆ ವೇದಗಳೇ ದೊಡ್ಡವೆಂದು ಬೋಧಿಸಿ, ಹಿಂದೂಗಳನ್ನು ಜ್ಞಾನವಿಲ್ಲದ ಅಂಧಕಾರದೊಳಗೆ ತಳ್ಳಿದ್ದಾರೆ. ಆದ್ದರಿಂದ ಹಿಂದೂ ಮತದಲ್ಲಿ ಅಸಂತೃಪ್ತಿ ಹೊಂದಿದವರೆಲ್ಲರೂ ಇತರ ಮತದೊಳಕ್ಕೆ ಹೋಗುತ್ತಿದ್ದಾರೆ. ಹಿಂದೂಮತದಲ್ಲಿ ಯಾವ ದೇವರನ್ನು ಪೂಜಿಸಬೇಕೋ ತಿಳಿಯದ ಕೆಲವರು ಒಂದೇ ದೇವರನ್ನು ಸೂಚಿಸುವ ಪರ ಮತದೊಳಕ್ಕೆ ಹೋಗುತ್ತಿದ್ದಾರೆ. ಈ ವಿಧವಾಗಿ ಹಿಂದೂಮತ ಕ್ಷೀಣಿಸಿ ಹೋಗುವುದಕ್ಕೆ ಎಷ್ಟೋ ಕಾರಣಗಳಿದ್ದರೂ, ಅಸಲಾದ ಕಾರಣ ಭಗವದ್ಗೀತೆಯಲ್ಲಿನ ಜ್ಞಾನ ಹಿಂದೂಗಳಿಗೆ ತಿಳಿಯದಂತೆ ಹೋಗುವುದೇ ಎಂದು ಹೇಳಬಹುದು. ಸರ್ವ ಮತಗಳು ಹಿಂದೂಮತವನ್ನು ಆಧಾರಮಾಡಿಕೊಂಡು ಹುಟ್ಟಿರುವವೆಂದು, ಯಾವ ಮತವೂ ಇಲ್ಲದ ದಿನ ಇಂದೂತ್ವ ಹೊರತು ಯಾವ ಮತವೂ ಇಲ್ಲವೆಂದು ತಿಳಿಯದ ಹಿಂದೂಗಳಿರುವುದರಿಂದ, ಇತರ ಮತದವರು ಹಿಂದೂಗಳನ್ನು ಸುಲಭವಾಗಿ ಆಕರ್ಷಿಸುತ್ತಿದ್ದಾರೆ.

ಸೃಷ್ಠಿ ಆದಿಯಿಂದ ಇರುವುದು ಇಂದೂಜ್ಞಾನ. ಇಂದೂ ಎನ್ನುವ ಶಬ್ಧಕ್ಕೆ ಪ್ರತ್ಯೇಕವಾದ ಅರ್ಥವಿದೆಯೆಂದೂ, ಹಿಂದೂ ಎನ್ನುವ ಪದಕ್ಕೆ ಅರ್ಥವೇ ಇಲ್ಲವೆಂದು ನಾನು ಅನೇಕಬಾರಿ ನನ್ನ ಗ್ರಂಥಗಳಲ್ಲಿ ಹೇಳಿದ್ದೇನೆ. ಇಂದೂ ಎಂದರೆ ಚಂದ್ರನು. ಚಂದ್ರನು ಜ್ಞಾನಕ್ಕೆ ಚಿಹ್ನೆ ಮತ್ತು ಜ್ಯೋತಿಷ್ಯ ಶಾಸ್ತ್ರದ ಪ್ರಕಾರ ಜ್ಞಾನಕ್ಕೆ ಚಂದ್ರನು ಅಧಿಪತಿ. ಚಂದ್ರನ ಹೆಸರಿಂದ ಆದಿಯಿಂದ ಇರುವ ಜ್ಞಾನವೇ ಇಂದೂ ಜ್ಞಾನ. ಇಂದೂ ಜ್ಞಾನ ಆದಿಯಲ್ಲೇ ದೇವರು ವಾಣಿಯಿಂದ ಸೂರ್ಯನಿಗೆ ತಿಳಿಸಿದ್ದಾನೆ. ಹಾಗೆ ತಿಳಿದ ಜ್ಞಾನ ಎರಡನೆಬಾರಿ ಭಗವಂತನಿಂದ ಭಗವದ್ಗೀತೆ ರೂಪದಲ್ಲಿ ತಿಳಿದಿದೆ. ದ್ವಾಪರಯುಗದ ಅಂತ್ಯದಲ್ಲಿ ಇಂದಿಗೆ ಸುಮಾರು ಐದುಸಾವಿರ ನೂರ ಐವತ್ತು ವರ್ಷಗಳ ಪೂರ್ವ ದೈವಜ್ಞಾನ ಎರಡನೆ ಬಾರಿ ತಿಳಿಯಿತು. ಎರಡನೆ ಬಾರಿ ತಿಳಿದ ದೈವಜ್ಞಾನ ಭಗವದ್ಗೀತೆಯೆನ್ನುವ ಹೆಸರಿಂದ ಗ್ರಂಥರೂಪವಾಗಿದೆ. ಆದ್ದರಿಂದ ಭಗವದ್ಗೀತೆಯಲ್ಲಿ ಶ್ರೇಷ್ಠವಾದ ಜ್ಞಾನ, ದೇವರು ಭಗವಂತನಾಗಿ ಬಂದು ತಿಳಿಸಿದ

ಜ್ಞಾನ, ಸೃಷ್ಠಿ ಆದಿಯಲ್ಲಿ ಹೇಳಿದ ಜ್ಞಾನ ಇದೆಯೆಂದು ಹೇಳಬಹುದು. ಪ್ರಪಂಚದಲ್ಲಿನ ಸಮಸ್ತ ಮಾನವರಿಗೂ ಭಗವದ್ಗೀತೆ ಜ್ಞಾನ ಆಮೋದ ಯೋಗ್ಯವಾದ ಜ್ಞಾನ. ಆದ್ದರಿಂದ ಅದನ್ನು ಖಂಡಿಸುವುದಕ್ಕಾಗಲೀ, ಅಲ್ಲವೆಂದು ಹೇಳುವುದಕ್ಕಾಗಲೀ ಯಾರೂ ಸಾಹಸ ಮಾಡಬಾರದು. ಹಾಗೆ ಮಾಡಿದರೇ ನಿಜವಾಗಿ ದೇವರನ್ನು, ದೇವರ ಜ್ಞಾನವನ್ನು ಎದುರಿಸಿದಂತಾಗುತ್ತದೆ.

ಎರಡನೆಯ ಬಾರಿ ಹೇಳಿದ ಜ್ಞಾನ ಭಾರತದೇಶಕ್ಕೆ ಮಾತ್ರ ಪರಿಮಿತವಾಗಿ ಹೋಗಿದೆ. ಭಾರತದೇಶದಲ್ಲಿ ಸಹ ಕೆಲವರಿಗೆ ಮಾತ್ರವೇ ತಿಳಿದಿರುವಾಗ ಎಷ್ಟೋಜನಕ್ಕೆ ಅದು ತಿಳಿಯದಂತೆ ಹೋಗಿದೆ. ಭಗವದ್ಗೀತಾ ಜ್ಞಾನವನ್ನು ಹೇಳಿ ಮೂರು ಸಾವಿರ ವರ್ಷಗಳಾದರೂ ಅದು ಭಾರತದೇಶವನ್ನು ದಾಟಿ ಹೋಗದಿರುವುದರಿಂದ, ಪ್ರಪಂಚದಲ್ಲಿ ಉಳಿದ ಕಡೆ ಸಹ ಜನರಿಗೆ ಜ್ಞಾನ ತಿಳಿಯಬೇಕೆನ್ನುವ ಉದ್ದೇಶದಿಂದ ಭಾರತದೇಶದಲ್ಲಿ ತಿಳಿಸಿದಹಾಗೇ ಭೂಮಿಗೆ ಮಧ್ಯದಲ್ಲಿರುವ ಇಸ್ರಾಈಲ್ ದೇಶದಲ್ಲಿ ತನ್ನ ಜ್ಞಾನವನ್ನು ದೇವರು ತಿಳಿಸಿದ್ದಾನೆ. ಹಾಗೆ ಭೂಮಿಮೇಲೆ ಪುನಃ ಮೂರು ಸಾವಿರ ವರ್ಷಗಳಿಗೆ ತಿಳಿಸಿದ ಜ್ಞಾನ ಬೈಬಲ್ ಗ್ರಂಥದಲ್ಲಿ ನಾಲ್ಕು ಸುವಾರ್ತೆಗಳ ರೂಪದಲ್ಲಿ ಇದೆ. ನಾಲ್ಕು ಸುವಾರ್ತೆಗಳ ಬೈಬಲ್ ಗ್ರಂಥವೊಂದರ ಆಧಾರದಿಂದ ಕೆಲವರು ಒಂದು ಸಂಘವನ್ನು ತಯಾರು ಮಾಡಿ, ಅದಕ್ಕೆ ಕ್ರೈಸ್ತ ಸಂಘ ಎಂದು ಹೆಸರು ಇಟ್ಟುಕೊಂಡಿದ್ದಾರೆ. ಕ್ರೈಸ್ತ ಸಂಘ ಬೆಳೆದು ದೊಡ್ಡದಾದ ನಂತರ ಕ್ರೈಸ್ತ ಸಂಘಕ್ಕೆ ಕ್ರೈಸ್ತ ಮತವೆಂದು ಹೆಸರು ಇಟ್ಟುಕೊಂಡಿದ್ದಾರೆ. ಆ ವಿಧವಾಗಿ ತಯಾರಾದ ಕ್ರೈಸ್ತ ಮತ ಸ್ವಲ್ಪ ಕಾಲಕ್ಕೆ ಪ್ರಪಂಚ ವ್ಯಾಪ್ತವಾಗಿ ವಿಸ್ತರಿಸಿದೆ. ಆದರೂ ಕ್ರೈಸ್ತ ಜ್ಞಾನ ಹರಡದ ಪ್ರಾಂತ ಸ್ವಲ್ಪವಿರುವಾಗ, ಅಲ್ಲಿರುವವರಿಗೂ ದೇವರ ಜ್ಞಾನ ತಿಳಿಯಬೇಕೆನ್ನುವ ಉದ್ದೇಶದಿಂದ ಸೂರ್ಯಗ್ರಹ ಆದಿಯಲ್ಲೇ ಭಾರತದೇಶದಲ್ಲಿ ದೈವಜ್ಞಾನ ತಿಳಿಸಿದಹಾಗೆ, ಜಿಬ್ರಯೇಲ್ ಗ್ರಹ ಸೂರ್ಯನು ಹೇಳಿದ ದೈವಜ್ಞಾನವನ್ನು ಇಸ್ರಾಈಲ್ ದೇಶ ಸಮೀಪದಲ್ಲಿರುವ ಮಕ್ಕಾ ಪ್ರಾಂತದಲ್ಲಿ, ಮದೀನಾ ಪ್ರಾಂತದಲ್ಲಿ ಮುಹಮ್ಮದ್ ಪ್ರವಕ್ತರವರಿಗೆ ತಿಳಿಸಿದ್ದಾನೆ. ಈ ವಿಧವಾಗಿ

ಒಂದೇ ದೇವರ ಜ್ಞಾನ, ಸೃಷ್ಠಿ ಆದಿಯಲ್ಲಿ ವಾಣಿಯಿಂದ ಹೇಳಲಾಗಿರುವ ಜ್ಞಾನ ಭಾರತದೇಶದಲ್ಲೂ, ಇಸ್ರಾಈಲ್ ದೇಶದಲ್ಲೂ ಇಬ್ಬರು ವ್ಯಕ್ತಿಗಳಿಂದ ತಿಳಿದಿರುವಾಗ, ಬೈಬಲ್ ಜ್ಞಾನ ತಿಳಿದನಂತರ ಆರುನೂರು ಸಂವತ್ಸರಗಳಿಗೆ ಮುಹಮ್ಮದ್ ಪ್ರವಕ್ತರಿಗೆ ಜಿಬ್ರಯೇಲ್ ಗ್ರಹ ದೈವಜ್ಞಾನವನ್ನು ತಿಳಿಸಿದ್ದಾನೆ. ಹೀಗೆ ಮೂರು ವಿಧಗಳಲ್ಲಿ ಮೂರು ಬಾರಿ ದೇವರ ಜ್ಞಾನ ಭೂಮಿಮೇಲೆ ತಿಳಿದಿರುವಾಗ, ಯೇಸು ಹೇಳಿರುವುದು ಕ್ರೈಸ್ತ ಮತ ಎನ್ನುವ ಹೆಸರಿಂದ ಚಲಾವಣೆ ಆದಾಗ, ಜಿಬ್ರಯೇಲ್ ಗ್ರಹ ಹೇಳಿರುವುದು ಇಸ್ಲಾಮ್ ಎನ್ನುವ ಹೆಸರಿಂದ ಚಲಾವಣೆ ಆಗುತ್ತಿದೆ. ಹಾಗೇ ಶ್ರೀಕೃಷ್ಣನು ಹೇಳಿದ ಜ್ಞಾನ ಹಿಂದೂ ಮತಕ್ಕೆ ಸಂಬಂಧಿಸಿರುವುದೆಂದು ಹೇಳಬಹುದು. ಐದು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಹೇಳಿದ ಜ್ಞಾನ ಭಗವದ್ಗೀತೆ ಗ್ರಂಥ ರೂಪವಾಗಿ, ಎರಡು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಹೇಳಿದ ಜ್ಞಾನ ಬೈಬಲ್ ಗ್ರಂಥವಾಗಿರುವಾಗ, ಮೂರನೆ ಬಾರಿ 14ನೂರು ಸಂವತ್ಸರಗಳ ಪೂರ್ವದಲ್ಲಿ ಹೇಳಿದ ಜ್ಞಾನ ಖುರ್‌ಆನ್ ಗ್ರಂಥವಾಗಿ ಇವೆ.

ಮೂರು ಗ್ರಂಥಗಳನ್ನು ಅನುಸರಿಸುವ ಪ್ರಜೆಗಳು ಮೂರು ಮತಗಳಾಗಿ ಬೇರೆಯಾಗುವುದು ನಡೆದಿದೆ. ಯಾರು ಹೇಗೆ ಬೇರೆಯಾದರೂ ದೇವರು ಹೇಳಿದ ಜ್ಞಾನ ಮನುಷ್ಯರ ಮಧ್ಯದಲ್ಲಿ ಮೂರು ಗ್ರಂಥಗಳಾಗಿ ಇದೆ. ಮೂರು ಮತಗಳಾಗಿರುವ ಪ್ರಜೆಗಳು ನಮ್ಮ ಮತ ದೊಡ್ಡದು, ನಮ್ಮ ಜ್ಞಾನ ದೊಡ್ಡದು ಎಂದು ಹೇಳಿಕೊಳ್ಳುತ್ತಿದ್ದರೂ, ದೇವರ ಜ್ಞಾನ ಸ್ವಲ್ಪ ಬದಲಾವಣೆಯಿಂದ ಮೂರು ಗ್ರಂಥಗಳಾಗಿ ನಮ್ಮ ಮುಂದೆ ಇದೆಯೆಂದು ಹೇಳಬಹುದು. ಮೂರು ಗ್ರಂಥಗಳ ರೂಪದಲ್ಲಿದ್ದರೂ, ಮೂರು ಮತಗಳ ರೂಪದಲ್ಲಿದ್ದರೂ ಅದರಲ್ಲಿ ಇರುವುದು ಒಂದೇ ದೇವರ ಜ್ಞಾನವೆಂದು ಎಲ್ಲರೂ ತಿಳಿಯಬೇಕು. ಸೃಷ್ಠಿ ಆದಿಯಲ್ಲಿ ವಾಣಿಯಿಂದ ಹೇಳಿದ ಜ್ಞಾನವೇ ನಂತರ ಇಬ್ಬರು ಗ್ರಹಗಳಿಂದ, ಇಬ್ಬರು ಮನುಷ್ಯರಿಂದ ತಿಳಿಸಲಾಗಿದೆ. ದೇವರಿಂದ ಆದಿಯಲ್ಲಿ ಬಂದಿರುವ ಜ್ಞಾನ ಹೊರತು ಪ್ರಪಂಚದಲ್ಲಿ ಎರಡನೆ ಜ್ಞಾನವೇ ಇಲ್ಲ. ಆದುದರಿಂದ ಎಲ್ಲಿ ಹೇಳಿದರೂ,

ಯಾರು ಹೇಳಿದರೂ ಅದೇ ಜ್ಞಾನವನ್ನೇ ಹೇಳಬೇಕಾಗಿ ಬಂದಿದೆ. ಆದ್ದರಿಂದ ಈ ದಿನ ಮೂರು ಮತಗಳಲ್ಲಿ ಮೂರು ಗ್ರಂಥಗಳಲ್ಲಿ ಇರುವುದು ಒಂದೇ ಜ್ಞಾನವೆಂದು ತಿಳಿಯುತ್ತಿದೆ. ಮೂರು ಗ್ರಂಥಗಳಲ್ಲಿನ ಜ್ಞಾನ ಒಂದೇ ದೇವರ ಜ್ಞಾನವೆಂದು ಮನುಷ್ಯರು ತಿಳಿಯಲಾರದೆ ಹೋಗಿದ್ದಾರೆ. ಬೇರೆಬೇರೆ ಹೆಸರುಗಳಿರುವ ಮತಗಳಲ್ಲಿರುವ ಅವರು ಅವರ ಗ್ರಂಥವನ್ನು ಅವರು ಓದುವುದು ಹೊರತು, ಇತರ ಮತ ಗ್ರಂಥಗಳನ್ನು ಓದಲಾರದೆ ಇರುವುದರಿಂದ, ಇತರ ಗ್ರಂಥದಲ್ಲಿ ಏನಿರುವುದು ತಿಳಿಯದೆ ಹೋಗಿದೆಯೆಂದು ಹೇಳಬಹುದು. ಮೂರು ಮತಗಳಲ್ಲಿನ ಪ್ರಜೆಗಳೆಲ್ಲರೂ ಅವರ ಗ್ರಂಥವನ್ನು ಓದಿದ್ದಾರೆನ್ನುವ ನಂಬಿಕೆ ಇಲ್ಲ. ಇಂಥವರು ನೂರಕ್ಕೆ ಎಂಬತ್ತು ಜನ ಅಥವಾ ತೊಂಬತ್ತು ಜನ ಅವರ ಮತ ಹಿರಿಯರು ಹೇಳುವ ಮಾತುಗಳನ್ನೇ ಕೇಳುತ್ತಿರುತ್ತಾರಾಗಲೀ, ಅವರ ಮತ ಗ್ರಂಥವನ್ನು ಓದುವುದಿಲ್ಲ. ಆದ್ದರಿಂದ ಮೂರು ಗ್ರಂಥಗಳಲ್ಲಿ ಏನಿದೆಯೋ ಮೂರು ಮತಗಳಲ್ಲಿನ ಪ್ರಜೆಗಳೆಲ್ಲರಿಗೂ ತಿಳಿದಿಲ್ಲ. ಕೆಲವರು ಮತ ಹಿರಿಯರಾದವರು ಮತ ದ್ವೇಷದಿಂದ ಇತರ ಮತ ಗ್ರಂಥಗಳನ್ನು ಓದುತ್ತಿಲ್ಲ. ಯಾವುದಾದರೂ ಓದಿದರೂ ಅವನಿಗೆ ಗ್ರಂಥದಲ್ಲಿನ ಜ್ಞಾನ ಅರ್ಥ ವಾಗಿದೆಯೆನ್ನುವ ನಂಬಿಕೆ ಇಲ್ಲ. ಒಂದುವೇಳೆ ಯಾರಾದರೂ ಇತರ ಮತ ಗ್ರಂಥವನ್ನು ಓದಿ ಅರ್ಥ ಮಾಡಿಕೊಂಡರೂ, ಇತರ ಮತ ಗ್ರಂಥಗಳಲ್ಲಿ ಸಹ ದೇವರ ವಿಷಯವೇ ಇದೆಯೆಂದು ತಿಳಿದರೂ, ಆ ವಿಷಯ ಪ್ರಜೆಗಳಿಗೆ ತಿಳಿದರೆ ಪ್ರಜೆಗಳು ತನ್ನ ಅಧೀನದಲ್ಲಿ ಇರುವುದಿಲ್ಲವೆಂದು, ತನ್ನ ಹಿರೆತನ ಅವರ ಮೇಲೆ ಇರುವುದಿಲ್ಲವೆಂದು ತಿಳಿದು, ಅವನ ಹಿರೆತನಕ್ಕೋಸ್ಕರ ಇತರ ಮತಗಳಲ್ಲಿ ಎಲ್ಲಾ ಅಜ್ಞಾನವೇ ಇದೆಯೆಂದು, ತಮ್ಮ ಮತದಲ್ಲಿ ಮಾತ್ರವೇ ಜ್ಞಾನವಿದೆಯೆಂದು ಹೇಳುತ್ತಿರುವರು. ಈ ವಿಧವಾಗಿ ಒಂದು ಮತದಲ್ಲಿನ ಗ್ರಂಥದಲ್ಲಿ ಏನಿದೆಯೋ ಇತರ ಮತದವರಿಗೆ ತಿಳಿಯದಂತೆ ಹೋಗಿದೆ. ಅದರಿಂದ ಯಾರ ಮತವನ್ನು ಕುರಿತು ಅವರು ದೊಡ್ಡದಾಗಿ ಹೇಳಿಕೊಳ್ಳುತ್ತಿದ್ದಾರೆ.

ದೇವರು ಎಲ್ಲರಿಗೂ ಜ್ಞಾನ ತಿಳಿಯಬೇಕೆನ್ನುವ ಉದ್ದೇಶದಿಂದ ಮೂರು ಜಾಗಗಳಲ್ಲಿ ಮೂರು ಕಾಲಗಳಲ್ಲಿ ಜ್ಞಾನವನ್ನು ತಿಳಿಸಿರುವಾಗ, ಮನುಷ್ಯರು

ಅದಕ್ಕೆ ಮೂರು ಮತಗಳಾಗಿ ತಯಾರು ಮಾಡಿಕೊಂಡಿದ್ದಾರೆ. ಆದರೇ ಈ ವಿಧವಾಗಿ ತಯಾರಾದ ಮೂರು ಮತಗಳಲ್ಲಿ ಯಾವುದು ದೊಡ್ಡದು? ಎನ್ನುವ ಪ್ರಶ್ನೆ ಕೆಲವರಿಗೆ ಬರಬಹುದು. ಅದಕ್ಕೆ ಸಮಾಧಾನ ಹೀಗೆ ಹೇಳಬಹುದು. ಮೂರು ಮತಗಳಲ್ಲಿ ಇರುವುದು ಒಂದೇ ಜ್ಞಾನವೆಂದು, ಆದ್ದರಿಂದ ಮೂರೂ ಸಮಾನವೇ ಎಂದು ಹೇಳಬಹುದು. ಇಲ್ಲಿ ಚಿಕ್ಕ ಉದಾಹರಣೆಯನ್ನು ಹೇಳಿಕೊಳ್ಳೋಣ. ಒಂದು ಕುಟುಂಬದಲ್ಲಿ ತಂದೆಗೆ ಮೂವರು ಕುಮಾರರಿದ್ದಾರೆಂದುಕೊಳ್ಳಿ. ಮೂವರು ಮಕ್ಕಳು ತಂದೆ ಬೀಜದಿಂದ ಹುಟ್ಟಿರುವುದರಿಂದ ತಂದೆಗೆ ಮೂವರೂ ಕುಮಾರರೇ ಆಗುತ್ತಾರೆ. ಅಷ್ಟೇ ಅಲ್ಲದೆ ಮೂವರು ಮಕ್ಕಳಿಗೂ ತಂದೆ ಒಬ್ಬನೇ ವ್ಯಕ್ತಿಯಾಗುತ್ತಾನಲ್ಲವೆ! ಮೂವರು ಕುಮಾರರಿಗು ತಂದೆ ಒಬ್ಬನೇ ಆಗುವುದರಿಂದ ಮೂವರೂ ಒಬ್ಬನನ್ನೇ ತಂದೆಯೆಂದು ಹೇಳುತ್ತಾರೆ. ಮೂವರು ಕುಮಾರರು ತಂದೆಗೆ ಸಮಾನವೇ ಆದರೂ ತಂದೆ ಕುಮಾರರನ್ನು ಇವನು ನನ್ನ ದೊಡ್ಡ ಕುಮಾರ, ಇವನು ಮಧ್ಯ ಕುಮಾರ, ಇವನು ಚಿಕ್ಕ ಕುಮಾರನೆಂದು ವ್ಯತ್ಯಾಸಗಳನ್ನಿಟ್ಟು ಹೇಳುವನು. ಅದೇ ಮೂವರು ಮಕ್ಕಳು ತಂದೆಯನ್ನು ತೋರಿಸುವಾಗಲೋ, ಅಥವಾ ಹೇಳುವಾಗಲೋ ಹಿರೆ ಮಗ ತಂದೆಯನ್ನು ತಂದೆಯೆಂದೇ ಹೇಳುವನು. ಉಳಿದ ಇಬ್ಬರೂ ಸಹ ಹಾಗೇ ಹೇಳುವರು. ಆದರೇ ತಂದೆ ಇವನು ದೊಡ್ಡವನು, ಇವನು ಚಿಕ್ಕವನು, ಇವನು ಮಧ್ಯದವನು ಎಂದು ಕುಮಾರರನ್ನು ಕುರಿತು ಹೇಳಿದಹಾಗೆ ಕುಮಾರರು ತಂದೆಯನ್ನು ಕುರಿತು ವ್ಯತ್ಯಾಸದಿಂದ ಹೇಳುವುದಕ್ಕೆ ಸಾಧ್ಯವಿಲ್ಲ. ಹಿರೆ ಮಗ ದೊಡ್ಡಪ್ಪಯೆಂದೋ, ಚಿಕ್ಕ ಮಗ ಚಿಕ್ಕಪ್ಪ ಎಂದೋ, ಮಧ್ಯದವನು ಎರಡನೆ ಚಿಕ್ಕಪ್ಪ ಎಂದೋ ಹೇಳುವುದಿಲ್ಲ ಅಲ್ಲವೆ! ತಂದೆಗೆ ಕುಮಾರರು ದೊಡ್ಡ ಚಿಕ್ಕ ಆದರೂ, ಕುಮಾರರಿಗೆ ತಂದೆ ಸಮಾನವೇ ಎಂದು ಎಲ್ಲರಿಗೂ ತಿಳಿದಿದೆ. ಅದೇ ವಿಧವಾಗಿ ದೇವರು ತಂದೆಯಂತಹವನು, ಮೂರು ಗ್ರಂಥಗಳು ಅಥವಾ ಮೂರು ಮತಗಳು ಮೂವರು ಕುಮಾರರಂತಹವು. ತಂದೆಗೆ ಕುಮಾರರು ದೊಡ್ಡ, ಚಿಕ್ಕ, ಮಧ್ಯದವರಿರುವಹಾಗೆ, ದೇವರ ಲೆಕ್ಕದಲ್ಲಿ ಮೂರು ಗ್ರಂಥಗಳು ಮೊದಲು ಮಧ್ಯೆ ಹಿಂದೆ ಬಂದಿರುವವಾದ್ದರಿಂದ, ಮೊದಲು ಬಂದ ಗ್ರಂಥವನ್ನು

ಪ್ರಥಮ ದೈವ ಗ್ರಂಥವೆಂದೂ, ನಂತರ ಬಂದಿರುವುದನ್ನು ಮಧ್ಯೆ ದೈವ ಗ್ರಂಥವೆಂದೂ, ಕೊನೆಯಲ್ಲಿ ಬಂದಿರುವ ಗ್ರಂಥವನ್ನು ಕೊನೆಯ ದೈವ ಗ್ರಂಥವೆಂದೂ ಹೇಳುವುದು ನಡೆದಿದೆ. ತಂದೆಗೆ ಹುಟ್ಟಿರುವ ಮೂವರು ಮಕ್ಕಳು ತಂದೆ ಬೀಜದಿಂದಲೇ ಹುಟ್ಟಿದಹಾಗೆ, ದೇವರಿಂದ ಬಂದಿರುವ ಮೂರುಗ್ರಂಥಗಳು ದೇವರ ಅಂಶದಿಂದಲೇ ಬಂದಿವೆ. ಕುಮಾರರ ಪರವಾಗಿ ತಂದೆಯನ್ನು ಮೂವರು ಕುಮಾರರು ಯಾವ ವ್ಯತ್ಯಾಸ ಇಲ್ಲದಂತೆ ಎಲ್ಲರೂ ತಂದೆ ಎನ್ನುವಂತೆ, ಮೂರು ಗ್ರಂಥಗಳ ಪರವಾಗಿ ಹೇಳಿದರೇ ಮೂರು ಗ್ರಂಥಗಳೂ ಸಮಾನ ಹಕ್ಕುನಿಂದಲೇ ದೇವರನ್ನು ಯಾವ ವ್ಯತ್ಯಾಸ ಇಲ್ಲದಂತೆ ದೇವರೆಂದೇ ಹೇಳುತ್ತಿವೆ.

ಆದರೇ ನಾವೆಂದುಕೊಂಡಹಾಗೆ ಮೂರು ಗ್ರಂಥಗಳು ದೇವರನ್ನು ಸಮಾನವಾಗಿ ಹೇಳದೆ ನಮ್ಮ ದೇವರು ಬೇರೆ, ನಮ್ಮ ದೇವರು ಬೇರೆ ಎಂದು ಹೇಳುತ್ತಿವೆ ಅಲ್ಲವೆ! ಎಂದು ಯಾರಾದರೂ ಇಲ್ಲಿ ಪ್ರಶ್ನಿಸಬಹುದು. ಅದಕ್ಕೆ ನಮ್ಮ ಸಮಾಧಾನ ಏನೆಂದರೆ! ಒಬ್ಬನೇ ತಂದೆಗೆ ಮೂವರು ಮಕ್ಕಳು ಹುಟ್ಟಿದರೂ ಅವರು ಮೂವರೂ ಚಿಕ್ಕಂದಿನಿಂದ ಬೇರೆಬೇರೆ ಜಾಗಗಳಲ್ಲಿ ಬೆಳೆದಿದ್ದಾರೆಂದು ಕೊಳ್ಳಿ. ಆಗ ಮೂವರಿಗೂ ತಂದೆ ಒಬ್ಬನೇ ಎನ್ನುವ ವಿಷಯ ತಿಳಿಯದಂತೆ ಹೋಗುತ್ತದೆ. ಅವರು ತಂದೆಯನ್ನು ಕುರಿತು ಹೇಳುವಾಗ ನನ್ನ ತಂದೆ ದೊಡ್ಡವನೆಂದು ಯಾರಿಷ್ಟಕ್ಕೆ ಅವರು ಹೇಳುವುದು ಸಮಂಜಸವೇ. ತಂದೆಗೆ ತನ್ನ ಕುಮಾರರು ಬಿಡಿ ಬಿಡಿಯಾಗಿ ಬೇರೆಬೇರೆ ದೇಶಗಳಲ್ಲಿ ಬೆಳೆಯುತ್ತಿರುವು ದರಿಂದ ಮೂವರನ್ನು ತನ್ನ ಕುಮಾರರೆಂದು ಹೇಳುವುದೇ ಅಲ್ಲದೆ ಅವನು ದೊಡ್ಡವನು, ಇವನು ಮಧ್ಯದವನು ಇನ್ನೊಬ್ಬನು ಚಿಕ್ಕವನು ಎನ್ನುವ ಧ್ಯಾಸದಲ್ಲಿ ಹಾಗೇ ದೊಡ್ಡ ಚಿಕ್ಕ ವ್ಯತ್ಯಾಸದಿಂದ ಹೇಳುತ್ತಿರುವನು. ಹಾಗೆ ಹೇಳುವುದೂ ಸಹ ವಾಸ್ತವವೇ ಅಲ್ಲವೆ! ಅದೇ ವಿಧವಾಗಿ ಮೂರು ಗ್ರಂಥಗಳನ್ನು ದೊಡ್ಡ ಚಿಕ್ಕ ಎನ್ನುವ ವ್ಯತ್ಯಾಸದಿಂದ ದೇವರು ಹೇಳುತ್ತಿದ್ದರೂ, ಮೂರರಲ್ಲಿ ದೇವರ ಅಂಶವೇ ಇದೆಯಂದು ಎಲ್ಲರೂ ತಿಳಿಯಬೇಕು. ತಂದೆ ಬೀಜಕ್ಕೆ ಹುಟ್ಟಿದ ಮೂವರಲ್ಲಿ ತಂದೆ ಸ್ವಭಾವಗಳೇ ಇರುತ್ತವೆ ಆದ್ದರಿಂದ, ಮೂರು ಗ್ರಂಥಗಳಲ್ಲಿ

ಸಮಾನ ಜ್ಞಾನವಿದೆಯೆಂದು ಹೇಳಬಹುದು. ಈದಿನ ಇರುವ ಮೂರು ಗ್ರಂಥಗಳು ಭಗವದ್ಗೀತೆ, ಬೈಬಲ್, ಖುರ್‌ಆನ್ ಒಂದೇ ದೇವರನ್ನು ಕುರಿತು ತಿಳಿಸುತ್ತಿವೆ. ಹಾಗೇ ದೇವರು ತನ್ನ ಮೂರು ಗ್ರಂಥಗಳನ್ನು ಮೊದಲು ಬಂದಿರುವುದನ್ನು ಪ್ರಥಮ ದೈವ ಗ್ರಂಥವೆಂದೂ, ಕೊನೆಯಲ್ಲಿ ಬಂದಿರುವ ಗ್ರಂಥವನ್ನು ಅಂತಿಮ ದೈವಗ್ರಂಥವೆಂದೂ ಹೇಳುತ್ತಿದ್ದಾನೆ. ಯಾವ ವಿಧವಾಗಿ ಹೇಳಿದರೂ ತಂದೆಗೆ ಮೂವರು ಕುಮಾರರು ಸಮಾನವೇ, ಕುಮಾರರಿಗೆ ತಂದೆ ಸಮಾನವೇ ಎನ್ನುವ ವಿಷಯವನ್ನು ಮರೆಯಬಾರದು.

ತಂದೆಗೆ ಮೂವರು ಮಕ್ಕಳಿರುವಾಗ, ತಂದೆಗೆ ಮೂವರು ಸಮಾನವೇ ಆದರೂ, ತಂದೆ ತನ್ನ ಚಿಕ್ಕ ಮಕ್ಕಳಿಗೆ ದೊಡ್ಡ ಮಗನನ್ನು ತೋರಿಸಿ ನಿಮ್ಮ ಅಣ್ಣನ ಮಾತನ್ನು ಕೇಳು, ಅಣ್ಣನ ಮಾತನ್ನು ಮೀರಬೇಡಿ, ಅಣ್ಣನನ್ನು ಗೌರವಿಸಿ ಎಂದು ಹೇಳಿದಹಾಗೆ ದೇವರು ಅನೇಕ ಸಂದರ್ಭಗಳಲ್ಲಿ ಮೂರು ಗ್ರಂಥಗಳ ವಿಷಯವನ್ನು ಪ್ರಸ್ತಾಪಿಸಿದಾಗ ಉಳಿದ ಎರಡು ಗ್ರಂಥಗಳು, ಮೊದಲು ಬಂದಿರುವ ಭಗವದ್ಗೀತೆಯನ್ನು ಅನುಸರಿಸಿ ಬಂದಿರುವವೇ ಎಂದು, ಅನುಸರಿಸಿ ಹುಟ್ಟುವುದರಿಂದ ಅನುಜರು ಎಂದಹಾಗೆ, ಭಗವದ್ಗೀತೆಯನ್ನು ಅನುಸರಿಸಿ ಹೇಳಲಾಗಿರುವ ಗ್ರಂಥಗಳು ಆದ್ದರಿಂದ ಬೈಬಲ್ ಗ್ರಂಥವನ್ನೂ, ಖುರ್‌ಆನ್ ಗ್ರಂಥವನ್ನೂ ಭಗವದ್ಗೀತೆಗೆ ಅನುಕರಣೆ ಗ್ರಂಥಗಳೆಂದೂ, ಅನುಸರಿಸುವ ಗ್ರಂಥಗಳೆಂದೂ, ಗಿತೆಯನ್ನು ಧೃಡಪಡಿಸುವ ಗ್ರಂಥಗಳೆಂದೂ ಹೇಳಬಹುದು. ಈಗ ನಾನು ಹೇಳಿರುವ ಮಾತು ಬಹಳ ಜನರಿಗೆ ಇಷ್ಟವಾಗದೆ ಇರಬಹುದು. ಇದು ನನ್ನ ಮಾತಲ್ಲ ದೇವರ ಮಾತು ಎಂದು ನೀವು ಏಕೆ ಅಂದುಕೊಳ್ಳಬಾರದು? ಒಂದುಬಾರಿ ಖುರ್‌ಆನ್ ಗ್ರಂಥದಲ್ಲಿ 2ನೇ ಸೂರಾ 89ನೇ ವಾಕ್ಯವನ್ನು ನೋಡಿ **"ಅವರ ಹತ್ತಿರ ಇರುವ ದೈವ ಗ್ರಂಥವನ್ನು (ಭಗವದ್ಗೀತೆಯನ್ನು) ಧೃಢೀಕರಿಸುವ ಗ್ರಂಥ (ಬೈಬಲ್) ದೇವರ ಹತ್ತಿರದಿಂದ ಬಂದಾಗ, ತಿಳಿದೂ ಸಹ ಅವರು ಅದನ್ನು ತಿರಸ್ಕರಿಸತೊಡಗಿದರು. ಮತ್ತೆ ನೋಡುವುದಾದರೇ ಇದರ ಬರುವಿಕೆಗೆ ಮೊದಲು ತಮಗೆ ಅವಿಶ್ವಾಸಿಗಳ ಮೇಲೆ ವಿಜಯ ಕೈಗೂಡಬೇಕೆಂದು ಅವರು**

**ಸ್ವತಃವಾಗಿ ಅಭಿಲಷಿಸುತ್ತಿದ್ದರು. ಅಂತಹ ತಿರಸ್ಕಾರಿಗಳ ಮೇಲೆ ದೇವರ ಶಾಪ ಬೀಳುತ್ತದೆ."** ಈ ವಾಕ್ಯದಲ್ಲಿ ಮುಖ್ಯವಾಗಿ ಹೇಳಿಕೊಳ್ಳಬೇಕಾಗಿರುವುದು ಏನೆಂದರೆ! ಮನುಷ್ಯರ ಹತ್ತಿರ ಮೊದಲೇ ಇರುವ ಭಗವದ್ಗೀತೆಯನ್ನು ಧೃಢೀಕರಿಸುವ ಗ್ರಂಥ ದೇವರ ಹತ್ತಿರದಿಂದ ಬಂದಾಗ ಬಂದಿರುವ ಎರಡನೆಯ ಗ್ರಂಥವನ್ನು ಬಹಳ ಜನ ತಿರಸ್ಕರಿಸಿದ್ದಾರೆ. ಮೊದಲು ಬಂದು ಮನುಷ್ಯರ ಹತ್ತಿರ ಇರುವುದು ಭಗವದ್ಗೀತೆ ಗ್ರಂಥವಾದಾಗ, ಎರಡನೆಯ ಬಾರಿ ಬಂದಿರುವ ಬೈಬಲ್ ಗ್ರಂಥ ಭಗವದ್ಗೀತೆಯನ್ನು ಅದು ದೇವರ ಗ್ರಂಥವೆಂದು ಧೃಢೀಕರಿಸುವುದಕ್ಕೆ, (ಸಾಕ್ಷಿ ಹೇಳುವುದಕ್ಕೆ) ಬಂದಾಗ ಬಹಳ ಜನ ಬೈಬಲ್‌ನ್ನು ವ್ಯತಿರೇಖಿಸಿದ್ದಾರೆಂದೂ, ತಿರಸ್ಕರಿಸಿದ್ದಾರೆಂದೂ ಈ ವಾಕ್ಯದಲ್ಲಿ ಹೇಳಲಾಗಿದೆ. ಹಾಗೇ ಅದೇ ಸೂರಾದಲ್ಲಿ 91ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿ. **"ದೇವರು ಅವತರಿಸುವಂತೆ ಮಾಡಿದ ಗ್ರಂಥವನ್ನು (ಬೈಬಲ್‌ನ್ನು) ವಿಶ್ವಾಸಿಸಿ"** ಎಂದು ಅವರೊಂದಿಗೆ ಹೇಳಿದಾಗ "ನಮ್ಮ ಮೇಲೆ ಅವತರಿಸುವಂತೆ ಮಾಡಿರುವುದನ್ನು (ಭಗವದ್ಗೀತೆಯನ್ನು) ನಾವು ವಿಶ್ವಾಸಿಸುತ್ತಿದ್ದೇವೆ ಎಂದು ಸಮಾಧಾನ ಕೊಡುತ್ತಾರೆ. ಅದರ ನಂತರ ಬಂದಿರುವುದು (ಗೀತೆ ನಂತರ ಬಂದಿರುವುದು) (ಬೈಬಲ್) ಸತ್ಯವಾಗಿರುವುದಾದರೂ, ತನ್ನ ಹತ್ತಿರವಿರುವ ಗ್ರಂಥವನ್ನು (ಭಗವದ್ಗೀತೆಯನ್ನು) ಧೃಢೀಕರಿಸುತ್ತಿದ್ದರೂ ಅವರು ತಿರಸ್ಕರಿಸುತ್ತಾರೆ? 2ನೇ ಸೂರಾ 89 ಮತ್ತು 91 ಎರಡು ವಾಕ್ಯಗಳಲ್ಲಿ ದೇವರ ಹತ್ತಿರದಿಂದ ಬಂದಿರುವ ಮೊದಲನೆ ಗ್ರಂಥವಾದ ಭಗವದ್ಗೀತೆ ನಂತರ ದೇವರು ಹುಟ್ಟಿಸಿದ ಗ್ರಂಥ ಬೈಬಲ್. ಬೈಬಲ್ ಗ್ರಂಥ ಭಗವದ್ಗೀತೆಯನ್ನು ಧೃಢೀಕರಿಸುತ್ತಿದ್ದರೂ ಗೀತೆಗೆ ಸಾಕ್ಷಿಯನ್ನು ಕೊಡುವ ಸತ್ಯವಾದ ಗ್ರಂಥವಾದರೂ ಬಹಳ ಜನ ಅದನ್ನು ಒಪ್ಪಿಕೊಂಡಿಲ್ಲ. ಈ ದಿನ ಸಹ ಬಹಳ ಜನ ಹಿಂದೂಗಳು ಬೈಬಲ್‌ನಲ್ಲಿನ ಸತ್ಯ ತಿಳಿಯದೆ ತಮಗೆ ವಿರುದ್ಧ ಗ್ರಂಥವೆಂದು ಅಂದುಕೊಳ್ಳುವುದು ನಡೆಯುತ್ತಿದೆ. ಹಾಗೇ ಬೈಬಲ್‌ನ್ನು ಆಧಾರ ಮಾಡಿಕೊಂಡ ಕ್ರೈಸ್ತರಿಗೆ ಬೈಬಲ್ ಪ್ರತ್ಯೇಕವಾದ ಕ್ರೈಸ್ತರ ಗ್ರಂಥ ಎಂದು ಅಂದುಕೊಳ್ಳುತ್ತಿದ್ದಾರೆ. ಯಾವ ಕ್ರೈಸ್ತನಿಗೂ ಬೈಬಲ್ ಭಗವದ್ಗೀತೆಯನ್ನು ದೇವರ ಗ್ರಂಥವೆಂದು ಧೃಢೀಕರಿಸುವುದಕ್ಕೆ ಬಂದಿರುವುದೆಂದು ತಿಳಿದಿಲ್ಲ. ದೇವರು ಗೀತೆಯನ್ನು ಧೃಢಪಡಿಸುವುದಕ್ಕೆ

ಕಳುಹಿಸಿದ ಬೈಬಲ್ ಗ್ರಂಥ ಭಗವದ್ಗೀತೆಗೆ ಸೋದರ ನಂತಹದಾದರೂ, ಭಗವದ್ಗೀತೆಯನ್ನು ನಿಜವಾದ ದೇವರ ಗ್ರಂಥವೆಂದು ಸಾಕ್ಷಿಕೊಡುವುದಕ್ಕೆ ಬಂದರೂ, ಹಿಂದೂಗಳು ಅದನ್ನು ತಿರಸ್ಕರಿಸಿದ್ದಾರೆಂದು ಖುರ್‌ಆನ್ ಗ್ರಂಥದಲ್ಲಿ 2ನೇ ಸೂರಾ 89, 91ನೇ ವಾಕ್ಯಗಳಲ್ಲಿ ಹೇಳಿದ್ದಾರೆನ್ನುವ ವಿಷಯ ಮುಸ್ಲಿಮ್‌ರಿಗೂ ಸಹ ತಿಳಿದಿಲ್ಲ. ಈಗ ನಾನು ಹೇಳಿದರೇ ಮೂರು ಮತದವರಿಗೂ ಗ್ರಂಥಗಳಲ್ಲಿರುವ ಸತ್ಯ ತಿಳಿಯುತ್ತದೆ.

ಬೈಬಲ್ ನಂತರ ಖುರ್‌ಆನ್ ಗ್ರಂಥ ಹುಟ್ಟಿದೆಯೆಂದು, ಬೈಬಲ್‌ಗಿಂತ ಮೊದಲು ಭಗವದ್ಗೀತೆ ಹುಟ್ಟಿದೆಯೆಂದು ಹೇಳಿಕೊಂಡಿದ್ದೇವೆ. ನಾನು ಹೇಳಿರುವುದು ಅಕ್ಷರ ಸತ್ಯವೆನ್ನುವುದಕ್ಕೆ ಖುರ್‌ಆನ್ ಗ್ರಂಥದಲ್ಲಿ ಐದನೇ ಸೂರಾದಲ್ಲಿ 46ನೇ ಆಯತ್‌ನಲ್ಲಿ ಇರುವ ವಿಷಯವನ್ನು ನೋಡೋಣ. **"ಆ ಪ್ರವಕ್ತರ ನಂತರ ನಾವು ಮರ್ಯಮ್ ಕುಮಾರನಾದ ಈಸಾನ್ನು (ಯೇಸನ್ನು) ಕಳುಹಿಸಿದ್ದೇವೆ. ಆತನು ತನಗೆ ಪೂರ್ವ ಬಂದಿರುವ ತೌರಾತು ಗ್ರಂಥವನ್ನು ಸತ್ಯವೆಂದು ಧೃಢೀಕರಿಸುವವನು. ನಾವು ಆತನಿಗೆ ಇಂಜೀಲ್ ಗ್ರಂಥವನ್ನು ಕೊಟ್ಟಿದ್ದೇವೆ. (ಬೈಬಲ್ ಗ್ರಂಥವನ್ನು ಕೊಟ್ಟಿದ್ದೇವೆ) ಅದರಲ್ಲಿ ಸನ್ಮಾರ್ಗ ದರ್ಶನ ಹಾಗೂ ಪ್ರಕಾಶ ಇರುತ್ತಿದ್ದವು. ಅದು (ಬೈಬಲ್) ತನಗೆ ಮುಂದಿರುವ ತೌರಾತು ಗ್ರಂಥವನ್ನು ಧೃಢೀಕರಿಸುವುದು. ಅಷ್ಟೇ ಅಲ್ಲ ಅದು ದೈವಭೀತಿ ಇರುವವರಿಗೆ ಆಸಾಂತಂ ಮಾರ್ಗದರ್ಶಿನಿ ಮತ್ತು ಹಿತ ಬೋಧಿನಿ ಸಹಾ"** ಈ ವಾಕ್ಯದಲ್ಲಿ ಅರ್ಥವಾಗದ ವಿಷಯ ಯಾವುದೂ ಇಲ್ಲ ಆದರೂ ನಾನು ಹೇಳುವುದೇನೆಂದರೆ! ಇಬ್ಬರು ಕುಮಾರರನ್ನು ಇತರರು ಕೆಟ್ಟದಾಗಿ ಹೇಳಿಕೊಳ್ಳುತ್ತಿರುವಾಗ ಸ್ವತಃವಾಗಿ ಆ ಕುಮಾರರ ತಂದೆ ಬಂದು "ಅವರು ಇಬ್ಬರೂ ನನ್ನ ಕುಮಾರರೇ, ಚಿಕ್ಕವನು (ಎರಡನೆ ಮಗನಾದ ಬೈಬಲ್) ನನ್ನ ಹಿರೆ ಕುಮಾರನೊಂದಿಗೆ ಎಂದಿಗೂ ಎದುರಿಸಿ ಮಾತನಾಡಲಿಲ್ಲ. ತಮ್ಮ ಅಣ್ಣನನ್ನು ಗೌರವಿಸುತ್ತಿದ್ದಾನೆ. ನೀವು ನನ್ನ ಕುಮಾರರನ್ನು ನೋಡಿ ಕೆಟ್ಟದಾಗಿ ಮಾತನಾಡಿಕೊಳ್ಳುತ್ತಿದ್ದೀರ. ಅಣ್ಣನನ್ನು ತಮ್ಮನು ಎಷ್ಟೋ ಗೌರವಿಸುವುದೇ ಅಲ್ಲದೆ ಅಣ್ಣನ ಹಿರೆತನಕ್ಕೆ ಸಾಕ್ಷಿಯಾಗಿ, ಧೃಢೀಕರಣ

ವಾಗಿ ಇದ್ದಾನೆ" ಎಂದು ಹೇಳಿದಹಾಗೆ ಖುರ್‌ಆನ್ ಗ್ರಂಥದಲ್ಲಿ ಹೇಳಲಾಗಿದೆ. ಯೇಸುಗೆ ಕೊಟ್ಟಿರುವ ಗ್ರಂಥ ಇಂಜೀಲ್ ಎಂದು ಇದೆ. ಇಂಜೀಲ್ ಎಂದರೆ ಬೈಬಲ್ ಗ್ರಂಥವೆಂದು ಅರ್ಥ ಮಾಡಿಕೊಳ್ಳಬೇಕು. ಇಂಜೀಲು ಗ್ರಂಥ ತೌರಾತ್ ಗ್ರಂಥವನ್ನು ಧೃಢೀಕರಿಸುತ್ತಿದೆಯೆಂದು ಹೇಳುವುದು ನಡೆದಿದೆ. ತೌರಾತ್ ಗ್ರಂಥದ ಹೆಸರು ಹೊಸದಾಗಿ ಕಾಣಿಸುತ್ತಿದ್ದರೂ ಅದು ಬೈಬಲ್ ಗ್ರಂಥಕ್ಕಿಂತ ಮೊದಲು ಹುಟ್ಟಿದ ಭಗವದ್ಗೀತೆಯೆಂದು ತಿಳಿಯುತ್ತಿದೆ. ಐದನೆ (5ನೇ) ಸೂರಾ 43, 44ನೇ ವಾಕ್ಯಗಳಲ್ಲಿ ಸಹ ತೌರಾತ್ ಎನ್ನುವ ಹೆಸರು ಬಂದಿದೆ. ಆದ್ದರಿಂದ ಆ ಎರಡು ವಾಕ್ಯಗಳನ್ನು ನೋಡೋಣ.

**43) "ದೈವಾದೇಶಗಳು ಹೊಂದಿಸಲಾಗಿರುವ ತೌರಾತ್ ಗ್ರಂಥ ತಮ್ಮ ಹತ್ತಿರ ಇದ್ದರೂ ಅವರು ನಿನ್ನನ್ನು ಹೇಗೆ ನ್ಯಾಯನಿರ್ಣೇತನಾಗಿ ಮಾಡಿ ಕೊಳ್ಳುತ್ತಿದ್ದಾರೆ? ಯಥಾರ್ಥವೇನೆಂದರೇ ಇವರು ವಿಶ್ವಾಸಿಗಳೇ ಅಲ್ಲ."**

**44) "ನಾವು ತೌರಾತು ಗ್ರಂಥವನ್ನು ಅವತರಿಸುವಂತೆ ಮಾಡಿದ್ದೇವೆ. ಅದರಲ್ಲಿ ಮಾರ್ಗದರ್ಶನ ಹಾಗೂ ಪ್ರಕಾಶ (ಜ್ಯೋತಿ) ಇವೆ."**

ಮೇಲೆ ಎರಡು ಆಯತ್‌ಗಳಲ್ಲಿ ತೌರಾತ್ ಗ್ರಂಥವನ್ನು ದೊಡ್ಡದಾಗಿ ಹೇಳಲಾಗಿದೆ. ತೌರಾತು ಗ್ರಂಥದಲ್ಲಿ ದೈವಾದೇಶಗಳು, ಮಾರ್ಗದರ್ಶನ ಹಾಗೂ ಜ್ಯೋತಿ ಇವೆಯೆಂದು ಮಹಾ ಜ್ಞಾನಿ ಆದ ಜಿಬ್ರಯೇಲ್ ಹೇಳಿದ್ದಾನೆ. ಜ್ಯೋತಿ ಎಂದರೆ ಜ್ಞಾನಜ್ಯೋತಿ, ಜ್ಞಾನಾಗ್ನಿ ಎಂದು ಅರ್ಥ. ಹಾಗೇ ಮಾರ್ಗದರ್ಶಕತ್ವ ಎಂದರೆ ಜ್ಞಾನ ಮಾರ್ಗ ದರ್ಶನ ಎಂದು ಅರ್ಥ. ದೈವಾದೇಶಗಳು ಇರುವ ಗ್ರಂಥ ತೌರಾತು ಗ್ರಂಥವೆಂದು ಹೇಳಲಾಗಿದೆ. ತೌರಾತ್ ಎಂದರೆ ಅರಬ್ಬೀ ಭಾಷೆಯಲ್ಲಿ ಯಾವ ಅರ್ಥವಿದೆಯೋ ಆದರೆ ಆ ಶಬ್ದವನ್ನನುಸರಿಸಿ ತೆಲುಗು ಭಾಷೆಯಲ್ಲಿ ಅರ್ಥ ಹೇಳಿಕೊಳ್ಳೋಣ. 'ತೌ' ಎಂದರೆ ಮೂರು ಎಂದು 'ರಾತ್' ಎಂದರೆ ರಾತ್ರಿಯೆಂದು ಅರ್ಥ. ಸೇರಿಸಿ ಹೇಳಿದರೆ ಮೂರು ರಾತ್ರಿಗಳು ಎಂದು ಅರ್ಥ ಬರುತ್ತದೆ. ಮೂರು ರಾತ್ರಿಗಳು ಎಂದು ಹೇಳುವ ಮಾತಲ್ಲಿ

ಆಧ್ಯಾತ್ಮಿಕ (ದೈವಜ್ಞಾನ) ಏನಿದೆಯೆಂದು ಕೆಲವರಂದುಕೊಳ್ಳಬಹುದು. ಅದಕ್ಕೆ ಉತ್ತರವಾಗಿ ನಾನು ಹೇಳುವುದೇನೆಂದರೆ!

'ರಾತು' ಅಥವಾ 'ರಾತ್' ಎಂದರೆ ರಾತ್ರಿ ಎಂದು ಹೇಳಬಹುದು. ರಾತ್ರಿ ಕತ್ತಲಮಯ. ಕತ್ತಲಲ್ಲಿ ಏನೂ ಕಾಣಿಸುವುದಿಲ್ಲ. ರಾತ್ರಿಹೊತ್ತು ಏನೂ ಕಾಣಿಸುವುದಿಲ್ಲ ಆದ್ದರಿಂದ ನೋಡುವುದಕ್ಕೆ ಜ್ಯೋತಿ ಅಥವಾ ಲೈಟು ಅವಶ್ಯ. ಜ್ಯೋತಿಯಿಂದ ಬೆಳಕು ಬರುತ್ತದೆ. ಬರುವ ಬೆಳಕಿನಿಂದ ಎದುರಿಗಿರುವ ದೃಶ್ಯವನ್ನು ನೋಡಬಹುದು. ಜ್ಯೋತಿ ಇಲ್ಲದೇ ಹೋದರೇ ರಾತ್ರಿ ಹೊತ್ತು ಏನೂ ಕಾಣಿಸುವುದಿಲ್ಲವೆನ್ನುವ ಅರ್ಥ ಕೊಡುತ್ತಾ, ಮೂರು ರಾತ್ರಿಗ(ತೌರಾತ್)ಳೆಂದು ಹೇಳುವುದು ನಡೆದಿದೆ. ಅದರ ವಿವರ ಏನೆಂದರೆ! ಪ್ರತಿ ಮನುಷ್ಯನಿಗೂ ಪ್ರಪಂಚ ಕಾಣಿಸುತ್ತಿದೆ. ದೈವ ಕಾಣಿಸುವುದಿಲ್ಲ. ದೈವ ಒಂದೇ ಬಾರಿ ತಿಳಿಯದು. ಜ್ಞಾನವನ್ನು ತಿಳಿದ ವ್ಯಕ್ತಿಗೆ ದೇವರು ಮೂರು ಭಾಗಗಳಾಗಿ ತಿಳಿಯುವನು. ಏಕೆಂದರೆ! ದೇವರು ಮೂರು ಭಾಗಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಆದ್ದರಿಂದ ಒಂದೇಬಾರಿ ದೇವರನ್ನು ಯಾರೂ ತಿಳಿಯಲಾರರು. ದೇವರು ಆತ್ಮ ಸ್ವರೂಪನು ಆದ್ದರಿಂದ, ದೇವರು ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟಿದ್ದಾನೆ. ಮೂರು ಆತ್ಮಗಳಾಗಿರುವ ದೇವರನ್ನು ತಿಳಿಯುವುದಕ್ಕೆ ಮೊದಲು ಜೀವಿಯನ್ನು ನಂತರ ಆತ್ಮನನ್ನು ತಿಳಿಯಬೇಕು. ಜೀವಾತ್ಮನನ್ನು, ಆತ್ಮನನ್ನು ತಿಳಿದ ನಂತರ ಆ ಎರಡು ಆತ್ಮಗಳನ್ನು ಅನುಸಂಧಾನ ಮಾಡಬೇಕು. ಅದನ್ನೇ ಯೋಗ ಎನ್ನುತ್ತೇವೆ. ಎರಡು ಆತ್ಮಗಳು ಏಕವಾದ ನಂತರ ಸ್ವಲ್ಪ ಕಾಲಕ್ಕೆ ಪರಮಾತ್ಮ ತಿಳಿಯುವನು. ಈ ಮೂರು ಆತ್ಮಗಳನ್ನು ತಿಳಿಯುವುದೇ ನಿಜವಾದ ಜ್ಞಾನ, ನಿಜವಾದ ಮೋಕ್ಷ ಎನ್ನುತ್ತೇವೆ. ಮೂರು ಆತ್ಮಗಳನ್ನು ತಿಳಿಯದಂತೆ ಇರುವುದೇ ಅಜ್ಞಾನ, ಅಂಧಕಾರ ಎನ್ನುತ್ತೇವೆ. ಅಜ್ಞಾನ ಅಂಧಕಾರದಲ್ಲಿ ಏನೂ ತಿಳಿಯದು ಆದ್ದರಿಂದ, ಮೂರು ವಿಧಗಳಾಗಿರುವ ದೇವರನ್ನು ಮೂರು ಕಾಣಿಸದ ರಾತ್ರಿಗಳಾಗಿ ಹೆಸರನ್ನಿಟ್ಟು ಹೇಳಿದ್ದಾರೆ. ತೌರಾತ್ ಎಂದರೆ ಮೂರು ಆತ್ಮಗಳ ಅಗೋಚರ ಎಂದು ಅರ್ಥ. ಪ್ರತಿ ಮನುಷ್ಯ

ಅಗವ್ಯಗೋಚರನಾಗಿದ್ದೂ, ಅಜ್ಞಾನ ಅಂಧಕಾರದಲ್ಲಿ ದೇವರನ್ನು ತಿಳಿಯದಂತಿದ್ದಾನೆ. ಮೂರು ತಿಳಿಯದ ಆತ್ಮಗಳನ್ನು ತೌರಾತ್ ಎಂದು ಹೇಳುತ್ತಾ, ಮೂರು ತಿಳಿಯದ ಆತ್ಮಗಳು ಭಗವದ್ಗೀತೆಯಲ್ಲಿವೆ ಆದ್ದರಿಂದ, ಭಗವದ್ಗೀತೆಯನ್ನು ತೌರಾತ್ ಗ್ರಂಥವೆಂದು ಹೇಳಿದ್ದಾರೆ. ತೌರಾತ್ ಗ್ರಂಥವನ್ನು ಶ್ರದ್ಧೆಯಿಂದ, ಭಕ್ತಿಯಿಂದ ಓದಿದರೇ ಅದರಲ್ಲಿ ಜ್ಯೋತಿ ಕಾಣಿಸಿ ಕತ್ತಲು ಹೋಗಿ ಮೂರು ಆತ್ಮಗಳನ್ನು ತಿಳಿಸಬಲ್ಲದು. ಜ್ಯೋತಿ ಇರುವಾಗ ಮೂರು ಆತ್ಮಗಳು ತಿಳಿಯಬಲ್ಲವೆಂದು, ಮೂರು ಆತ್ಮಗಳ ಗುರುತಿಗಾಗಿ ತೌರಾತ್ ಗ್ರಂಥವೆಂದು ಭಗವದ್ಗೀತೆಗೆ ಹೆಸರು ಇಡುವುದು ನಡೆದಿದೆ.

ಭಗವದ್ಗೀತೆ ಬರೆದು ಸುಮಾರು ಐದು ಸಾವಿರ ಸಂವತ್ಸರಗಳು ದಾಟಿಹೋದರೂ, ಅದು ಹೇಳಲಾಗಿರುವುದು ಸೃಷ್ಠಿ ಆದಿಯಲ್ಲೇ. ಭಗವದ್ಗೀತೆ ಎರಡನೆಬಾರಿ ಶ್ರೀಕೃಷ್ಣನಿಂದ ದ್ವಾಪರಯುಗದ ಕೊನೆಯಲ್ಲಿ ಹೇಳಿದ ನಂತರ ಅದನ್ನು ವೇದವ್ಯಾಸನು ಗ್ರಂಥರೂಪವಾಗಿ ಬರೆಯುವುದು ನಡೆದಿದೆ. ಅಂದಿನಿಂದ ಇಂದಿನವರೆಗೂ ಮೂನ್ನೂರು ಜನರಿಗೆ ಮೇಲಾಗಿ ಭಗವದ್ಗೀತೆಯನ್ನು ವಿವರಿಸಿ ಬರೆಯುವುದು ನಡೆದಿದೆ. ಎಷ್ಟೋ ಜನ ಸ್ವಾಮೀಜಿಯರು ವಿವರಿಸಿ ಹೇಳುವುದು ಸಹ ನಡೆದಿದೆ. ಆದರೂ ಗೀತೆಯಲ್ಲಿ ಮುಖ್ಯ ಸಾರಾಂಶವಾದ ಮೂರು ಆತ್ಮಗಳ ವಿವರವನ್ನು ಮಾತ್ರ ಹೇಳಲಿಲ್ಲ. ದೇವರು ಉನ್ನತವಾದ ತನ್ನ ಜ್ಞಾನವನ್ನು ಭಗವದ್ಗೀತೆಯಲ್ಲಿ ವಿವರಿಸಿ ಹೇಳುವುದೇ ಅಲ್ಲದೆ, ಮುಖ್ಯವಾಗಿ ತನ್ನ ಸ್ವರೂಪವಾದ ಮೂರು ಆತ್ಮಗಳನ್ನು ಕ್ಷರ, ಅಕ್ಷರ, ಪುರುಷೋತ್ತಮ ಎಂದು ತಿಳಿಸಿದ್ದಾನೆ. ದೇವರು ಹೇಳಿದ ಮೂವರು ಪುರುಷರ (ಆತ್ಮಗಳ) ವಿವರವನ್ನು ಇಲ್ಲಿಯವರೆಗೂ ಭಗವದ್ಗೀತೆಯಿಂದ ಯಾರೂ ಹೇಳದೆ ಹೋಗುವುದರಿಂದ, ಮೂರು ಆತ್ಮಗಳ ವಿವರ ತಿಳಿದ ನಾನು, ಆ ವಿಷಯವನ್ನು ಹೇಳಬೇಕೆಂದು ಕೊಂಡು **"ತ್ರೈತ ಸಿದ್ಧಾಂತ ಭಗವದ್ಗೀತೆ"** ಎಂಬ ಹೆಸರಿಂದ ಗೀತಾ ಗ್ರಂಥವನ್ನು ಬರೆಯುವುದು ನಡೆದಿದೆ. ತ್ರೈತ ಸಿದ್ಧಾಂತ ಭಗವದ್ಗೀತೆಯಲ್ಲಿ ಮೂರು ಆತ್ಮಗಳ ವಿವರವನ್ನು ಹೇಳುವುದು ನಡೆದಿದೆ. ಮೂರು ಆತ್ಮಗಳ ವಿವರವನ್ನು ಹೇಳಿದ

ಗ್ರಂಥ ಇಲ್ಲಿಯವರೆಗೂ ನಾವು ಬರೆದ ಭಗವದ್ಗೀತೆ ಹೊರತು ಇತರ ಗ್ರಂಥ ಯಾವುದೂ ಇಲ್ಲ. ಮೂರು ಆತ್ಮಗಳ ವಿವರ ದೇವರ ಎರಡನೆ ಗ್ರಂಥವಾದ ಬೈಬಲ್‌ನಲ್ಲೂ, ಹಾಗೇ ಮೂರನೆ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲೂ ಹೇಳಲಾಗಿದೆ. ಬೈಬಲ್, ಖುರ್‌ಆನ್ ಎರಡೂ ಗ್ರಂಥಗಳು ಮೊದಲು ಹುಟ್ಟಿದ ಭಗವದ್ಗೀತೆಯನ್ನು ಧೃಢೀಕರಿಸುವವೇ ಆದ್ದರಿಂದ, ಅವುಗಳಲ್ಲಿ ಸಹ ಮೂರು ಆತ್ಮಗಳ ವಾಕ್ಯಗಳು ದೇವರು ಹೇಳಿದ್ದಾನೆ. ಆದರೇ ತೌರಾತ್ ಗ್ರಂಥದಲ್ಲಿ ಇದ್ದಂತೆ ಉಳಿದ ಎರಡು ಗ್ರಂಥಗಳಲ್ಲಿ ಸಹ ಮೂರು ಆತ್ಮಗಳು ಕತ್ತಲಮಯವಾಗಿ ಯಾರಿಗೂ ತಿಳಿಯದಂತೆ ಉಳಿದುಹೋಗಿವೆ. ಇಲ್ಲಿಯವರೆಗು ಭಗವದ್ಗೀತೆ ಯಲ್ಲಾಗಲೀ ಹಾಗೇ ಬೈಬಲ್, ಖುರ್‌ಆನ್ ಗ್ರಂಥಗಳಲ್ಲಾಗಲೀ ಮೂರು ಆತ್ಮಗಳ (ಕ್ಷರ, ಅಕ್ಷರ, ಪುರುಷೋತ್ತಮರ) ವಿವರವನ್ನು ಹೊರಗೆ ಯಾರೂ ತೆಗೆಯಲಿಲ್ಲ. ಆದ್ದರಿಂದ ಭಗವದ್ಗೀತೆಯನ್ನು ಅನುಸರಿಸಿ ಭಗವದ್ಗೀತೆಗೆ ಅನುಜರ ಹಾಗೆ ಹುಟ್ಟಿರುವ ಬೈಬಲ್, ಖುರ್‌ಆನ್ ಗ್ರಂಥಗಳನ್ನು ಸಹ ತೌರಾತ್ ಗ್ರಂಥದಲ್ಲಿನ ಭಾಗಗಳೆಂದೇ ಹೇಳಬಹುದು.

ಬೈಬಲ್, ಖುರ್‌ಆನ್ ಎರಡು ಗ್ರಂಥಗಳು ಭಗವದ್ಗೀತೆಗೆ ತಮ್ಮಂದಿರಂತೆ ಇದ್ದು, ಭಗವದ್ಗೀತೆಯಲ್ಲಿನ ವಿಷಯವನ್ನು ಧೃಢೀಕರಿಸುತ್ತಾ ಬಲಪಡಿಸುತ್ತಿವೆ. ಆ ವಿಷಯ ತಿಳಿಯದ ಹಿಂದೂಗಳು ಬೈಬಲ್, ಖುರ್‌ಆನ್ ಗ್ರಂಥಗಳು ಇತರ ಮತ ಗ್ರಂಥಗಳೆಂದೂ, ಭಗವದ್ಗೀತೆಗೆ ವಿರುದ್ಧವೆಂದು ತಪ್ಪಾಗಿ ತಿಳಿಯುವುದು ನಡೆಯುತ್ತಿದೆ. ಹಾಗೇ ಬೈಬಲ್, ಖುರ್‌ಆನ್ ಗ್ರಂಥದವರು ಸಹ ಭಗವದ್ಗೀತೆ ತಮ್ಮ ಗ್ರಂಥಗಳಿಗಿಂತ ಭಿನ್ನವಾಗಿರುವುದೆಂದು ಅಂದು ಕೊಳ್ಳುವುದು ನಡೆದಿದೆ. ಮೂರು ಗ್ರಂಥಗಳನ್ನು ಹಿಡಿದುಕೊಂಡು ಮೂರು ಮತಗಳಾಗಿ ಹೇಳಿಕೊಳ್ಳುವ ಮನುಷ್ಯರು ದೇವರ ಇಷ್ಟವನ್ನು ತಿಳಿಯದಂತೆ ತಮ್ಮ ಮನೋ ಭಾವಗಳನ್ನು, ತಮ್ಮ ಇಷ್ಟಗಳನ್ನು ಮೂರು ಗ್ರಂಥಗಳ ಮೇಲೆ ಹಾಕುತ್ತಿದ್ದಾರೆ. ಒಬ್ಬನೇ ತಂದೆ ಕುಮಾರರು ಒಂದೇ ಮತದವರಾಗುತ್ತಾರೆ ಆದರೆ, ಬೇರೆಬೇರೆ ಮತದವರಾಗುತ್ತಾರೆಂದು ಸ್ವಲ್ಪವೂ ಸಹ ಆಲೋಚಿಸದಂತೆ

ಹೋಗಿದ್ದಾರೆ. ಕೆಲವರು ಈಗ ನನ್ನನ್ನು ಈ ವಿಧವಾಗಿ ಪ್ರಶ್ನಿಸಬಹುದು. "ಭಗವದ್ಗೀತೆಯನ್ನು ನೀವು ಓದಿರಬಹುದು. ನಾವು ನಮ್ಮ ಖುರ್‌ಆನ್ ಗ್ರಂಥವನ್ನು ಓದಿದ್ದೇವೆ ನೀವು ಕಲ್ಪನೆ ಮಾಡಿ ಹೇಳುವ ಮೂರು ಆತ್ಮಗಳ ವಿಷಯ ನಮ್ಮ ಗ್ರಂಥದಲ್ಲಿ ಎಲ್ಲೂ ಇಲ್ಲವೆ. ಇಲ್ಲದ್ದನ್ನು ನೀವೇಕೆ ನಮಗೆ ಅಂಟಿಸುತ್ತಿದ್ದೀರೆಂದು ಮುಸ್ಲಿಮ್‌ರು ಕೇಳಬಹುದು. ಹಾಗೇ ಕ್ರೈಸ್ತರು ನೀವು ಹೇಳುವ ಕ್ಷರ, ಅಕ್ಷರ, ಪುರುಷೋತ್ತಮರೆನ್ನುವ ಮೂರು ಆತ್ಮಗಳ ವಿಷಯ ನಮ್ಮ ಗ್ರಂಥವಾದ ಬೈಬಲ್‌ನಲ್ಲಿ ಇಲ್ಲವೆ" ಎಂದು ಸಹ ಕೇಳಬಹುದು. ಅದಕ್ಕೆ ಇಬ್ಬರಿಗೂ ನಾವು ಹೇಳುವ ಸಮಾಧಾನ ಹೀಗೆ ಇದೆ.

ಭಗವದ್ಗೀತೆ ಮೊದಲ ದೇವರ ಗ್ರಂಥ. ಆದ್ದರಿಂದ ದೇವರಿಗೆ ದೊಡ್ಡ ಮಗನಾಗಿ ಹೇಳಿಕೊಳ್ಳಬಹುದು. ಅದಕ್ಕೇ ಅದನ್ನು ಪ್ರಥಮ ದೈವ ಗ್ರಂಥವೆಂದು ಹೇಳುತ್ತಿದ್ದೇವೆ. ನಂತರ ದೇವರಿಗೆ ಎರಡನೆ ಸಂತತಿಯಾಗಿ, ಎರಡನೆ ಮಗನಾಗಿ ಬೈಬಲ್ ಗ್ರಂಥ ಹುಟ್ಟಿದೆ. ಆದ್ದರಿಂದ ಅದನ್ನು ದ್ವಿತೀಯ ದೈವ ಗ್ರಂಥ ಎಂದು ಕರೆಯುತ್ತಿದ್ದೇವೆ. ಇನ್ನು ಎರಡು ಗ್ರಂಥಗಳ ನಂತರ ಹುಟ್ಟಿರುವುದು ಮೂರನೆ ಗ್ರಂಥ ಖುರ್‌ಆನ್ ಎಂದು ಹೇಳಬಹುದು. ಖುರ್‌ಆನ್ ಗ್ರಂಥ ದೇವರಿಗೆ ಕೊನೆಯ ಮಗನಂತಹದು. ದೇವರಿಗೆ ಚಿಕ್ಕ ಮಗ ಸ್ಥಾನದಲ್ಲಿದ್ದ ಖುರ್‌ಆನ್ ಗ್ರಂಥವನ್ನು ಅಂತಿಮ ದೈವ ಗ್ರಂಥವೆಂದು ಹೇಳುತ್ತಿದ್ದೇವೆ. ಒಂದೇ ತಂದೆಗೆ ಹುಟ್ಟಿದ ಮೂವರು ಕುಮಾರರು ತಂದೆ ಮಾತಿನ ಪ್ರಕಾರ ತಂದೆಗೆ ಬೆಲೆಕೊಡುವವರಾಗಿ, ಒಬ್ಬರನ್ನೊಬ್ಬರು ಗೌರವಿಸಿಕೊಳ್ಳುತ್ತಾ, ಒಬ್ಬರು ಮಾತನಾಡಿದ ಮಾತನ್ನೇ ಉಳಿದವರು ಸಹ ಮಾತನಾಡುತ್ತಿರುವರಲ್ಲವೆ! ಅದೇ ರೀತಿ ಪ್ರಥಮ ದೈವ ಗ್ರಂಥದಲ್ಲಿನ ಜ್ಞಾನ ವಿಷಯಗಳಿಗೆ ಅನುಗುಣವಾಗಿ, ಉಳಿದ ಎರಡು ಗ್ರಂಥಗಳಲ್ಲಿನ ಜ್ಞಾನ ಇದೆಯೆಂದು ಹೇಳಬಹುದು. ಇವುಗಳ ಮೇಲೆ ಪ್ರಜೆಗಳಿಗಿರುವ ಅನರ್ಥಗಳು ಹೋಗುವುದಕ್ಕೆ, ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲಿ ಮೂರು ಗ್ರಂಥಗಳನ್ನು ಸೇರಿಸಿ ಬಹಳ ಬಾರಿ ಹೇಳುವುದು ನಡೆದಿದೆ.

ಮೂರು ಆತ್ಮಗಳ ವಿಷಯ ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿಯೋಗದಲ್ಲಿ 16, 17 ಶ್ಲೋಕಗಳಲ್ಲಿ ಇರುವಾಗ, ಭಗವದ್ಗೀತೆಯನ್ನು ಅನುಸರಿಸಿ ಹುಟ್ಟಿದ ಬೈಬಲ್‌ನಲ್ಲಿ ಮತ್ತು ಖುರ್‌ಆನ್‌ನಲ್ಲಿ ಭಗವದ್ಗೀತೆಯಲ್ಲಿ ಹೇಳಿದಹಾಗೆ ಮೂರು ಆತ್ಮಗಳನ್ನು ಕುರಿತು ಹೇಳುವುದು ನಡೆದಿದೆ. ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ 50ನೇ ಸೂರಾದಲ್ಲಿ 21ನೇ ಆಯತ್‌ನಲ್ಲಿ ಹೀಗೆ ಇದೆ **"ಪ್ರತಿ ವ್ಯಕ್ತೀ ತನ್ನ ಹಿಂದೆ ತನ್ನನ್ನು ತೆಗೆದುಕೊಂಡು ಬರುವವನೊಬ್ಬನು, ಸಾಕ್ಷಿಕೊಡುವವನೊಬ್ಬನು ಇರುವ ಸ್ಥಿತಿಯಲ್ಲಿ ಹಾಜರಾಗುತ್ತಾನೆ."** ಈ ವಾಕ್ಯ ಸರ್ವ ಸಾಧಾರಣವಾಗಿ ಹೇಳಿದಹಾಗಿದ್ದರೂ ಇದರಲ್ಲಿ ದೇವರ ತ್ರೈತ ಸಿದ್ಧಾಂತ ಒಳಗೊಂಡಿದೆ. ಜೀವಾತ್ಮ, ಆತ್ಮ, ಪರಮಾತ್ಮ ಎನ್ನುವ ಮೂರು ಆತ್ಮಗಳ ವಿಷಯ ಹೇಳಲಾಗಿದೆ. ಮೂರು ಆತ್ಮಗಳ ವಿಷಯ ಒಂದು ಬಾರಿ ವಾಕ್ಯವನ್ನು ನೋಡಿದರೇ ಕಾಣಿಸದೆ ಹೋಗಬಹುದು. ಆದ್ದರಿಂದ ದೃಷ್ಠಿಯನ್ನು ಹರಿಸಿ ಜಾಗ್ರತೆಯಾಗಿ ನೋಡಬೇಕೆಂದು ತಿಳಿಸುತ್ತಿದ್ದೇನೆ. ಪ್ರತಿ ವ್ಯಕ್ತಿ ಒಬ್ಬ ಜೀವಿಯಾಗಿ ಇದ್ದಾನೆ. ಹೊರಗೆ ಯಾವ ಹೆಸರಿಂದ ಚಲಾವಣೆ ಆಗುವವನಾದರೂ, ಶರೀರದೊಳಗೆ ಮಾತ್ರ ಜೀವಿಯಾಗಿಯೇ ಇದ್ದಾನೆ. ಹೊರಗೆ ಶರೀರದ ಗುರುತಿಗಾಗಿ ಯಾವ ಹೆಸರನ್ನು ಇಟ್ಟುಕೊಂಡರೂ, ಶರೀರ ಅಂತರಂಗದಲ್ಲಿ ಪ್ರತಿ ವ್ಯಕ್ತಿ ಜೀವಾತ್ಮನಾಗಿಯೇ ಇದ್ದಾನೆ. ಜೀವಾತ್ಮನಾಗಿ ಇರುವವನು ಶರೀರದ ಒಳಗೆ ತಲೆ ಮಧ್ಯ ಭಾಗದಲ್ಲಿರುವ, ಮೂರು ಭಾಗಗಳಾಗಿರುವ ಗುಣಚಕ್ರದಲ್ಲಿ, ಯಾವುದೋ ಒಂದು ಭಾಗದಲ್ಲಿ ನಿವಾಸಿಸುತ್ತಿದ್ದಾನೆ. ತಲೆಮಧ್ಯದಲ್ಲಿ ವರಸೆಯಾಗಿ ಬ್ರಹ್ಮ, ಕಾಲ, ಕರ್ಮ, ಗುಣ ಚಕ್ರಗಳು ಎನ್ನುವ ನಾಲ್ಕು ಚಕ್ರಗಳ ಸಮುದಾಯ ಇದೆ. ಅದರಲ್ಲಿ ಮೇಲೆ ಬ್ರಹ್ಮ, ಕಾಲ, ಕರ್ಮ ಚಕ್ರಗಳಿರುವಾಗ ಕೆಳಗೆ ಗುಣಚಕ್ರವಿದೆ. ಅರ್ಥವಾಗುವುದಕ್ಕೆ ಅವುಗಳ ಆಕಾರವನ್ನು ನಂತರ ಪುಟದಲ್ಲಿ ನೋಡಬಹುದು.

ಈ ನಾಲ್ಕು ಚಕ್ರಗಳ ಸಮುದಾಯ ತಲೆಯಲ್ಲಿ ಹಣೆಯ ಒಳಗೆ ಇದೆ. ಈ ನಾಲ್ಕು ಚಕ್ರಗಳು ಪ್ರತಿ ಜೀವರಾಶಿಗೂ ಇರುತ್ತದೆ. ಮನುಷ್ಯನಿಗೆ ಕಳೆದ ಜೀವನ ಚರಿತ್ರೆ ಮತ್ತು ನಡೆಯುವ ವಿಧಿ ವಿಧಾನಗಳು ಎಲ್ಲಾ, ನಾಲ್ಕು ಚಕ್ರಗಳ




ಸಮುದಾಯದಲ್ಲಿ ಇರುತ್ತದೆ. ಜೀವಾತ್ಮ ಮಾತ್ರ ಕೆಳಗಿನ ಚಕ್ರವಾದ ಗುಣಚಕ್ರದಲ್ಲಿ ಮೂರು ಭಾಗಗಳಲ್ಲಿ ಒಂದು ಕಡೆ ಇರುತ್ತದೆ. ಮೂರು ಭಾಗಗಳಲ್ಲಿ ಗುಣಗಳಿವೆ. ಆ ಮೂರು ಗುಣ ಭಾಗಗಳಿಗೆ ಮೂರು ಹೆಸರುಗಳು ಇವೆ. ಹೊರಗಿನಿಂದ ಒಳಕ್ಕೆ ನೋಡಿದರೆ ಮೊದಲನೆಯದು ತಾಮಸ ಗುಣ ಭಾಗ, ಎರಡನೆಯದು ರಾಜಸ ಗುಣ ಭಾಗ, ಮೂರನೆಯದು ಸಾತ್ವಿಕ ಗುಣಭಾಗ ಎಂದು ಹೆಸರುಗಳು ಇವೆ. ಅದರಲ್ಲಿ ಯಾವುದೋ ಒಂದು ಭಾಗದಲ್ಲಿ ತಾನು ಮಾಡಿಕೊಂಡ ಕರ್ಮವನ್ನನುಸರಿಸಿ ಜೀವಾತ್ಮ ನಿವಾಸವಿರುತ್ತದೆ. ಜೀವಾತ್ಮ ತಾಮಸ ಗುಣ ಭಾಗದಲ್ಲಿ ಇದ್ದಾನೆಂದುಕೊಳ್ಳಿ. ಆಗ ಗುಣಚಕ್ರದಲ್ಲಿ ಜೀವಾತ್ಮ ಹೇಗಿರುವುದು ನಂತರ ಪುಟದಲ್ಲಿ ನೋಡಬಹುದು.

ಜೀವಾತ್ಮ ಎನ್ನುವವನು ಪ್ರತಿ ಶರೀರದಲ್ಲಿ ಗುಣಗಳ ಮಧ್ಯೆ ಬಂದೀಯಾಗಿ (ಖೈದೀಯಾಗಿ) ಇದ್ದಾನೆ. ಇದನ್ನನುಸರಿಸಿ ಜೀವಾತ್ಮ ಶರೀರವೆಲ್ಲಾ ಇಲ್ಲವೆಂದು, ಶರೀರದಲ್ಲಿ ತಲೆಯಲ್ಲಿ ಒಂದು ಕಡೆ ಮಾತ್ರ ಇದ್ದಾನೆಂದು ಹೇಳಬಹುದು. ಅಷ್ಟೇ ಅಲ್ಲದೆ ಜೀವಾತ್ಮ ಸ್ವತಂತ್ರನಲ್ಲ. ಮೇಲಿರುವ ಕರ್ಮಚಕ್ರದಲ್ಲಿನ ಕರ್ಮಛಾಯೆಗಳು ಗುಣಚಕ್ರದ ಮೇಲೆ ಬಿದ್ದಾಗ, ಗುಣಚಕ್ರದಲ್ಲಿನ ಜೀವಾತ್ಮ ಕರ್ಮದ ಪ್ರಕಾರ ನಡೆದುಕೊಳ್ಳಬೇಕಾಗಿರುತ್ತದೆ. ಕಾಣಿಸುವ ಶರೀರವೇ ಜೀವಾತ್ಮ ಎನಿಸುವಂತಿದ್ದರೂ ಶರೀರದ ಮೇಲೆ ಜೀವಾತ್ಮನಿಗೆ ಯಾವ




ಅಧಿಕಾರವೂ ಇಲ್ಲ. ಗುಣಚಕ್ರದಲ್ಲಿ ಕರ್ಮವನ್ನು ಅನುಭವಿಸುವುದು ಮಾತ್ರವೇ ಜೀವಾತ್ಮನ ಕೆಲಸ. ಶರೀರವೆಲ್ಲಾ ಆತ್ಮ ಎನ್ನುವುದು ವ್ಯಾಪಿಸಿದ್ದು, ಶರೀರವನ್ನು ಒಳಗಿನ ಕರ್ಮ ಪ್ರಕಾರ ನಡೆಸುತ್ತಿದೆ. ಇದನ್ನನುಸರಿಸಿ ಪ್ರಪಂಚದಲ್ಲಿ ಜೀವಾತ್ಮನಿಗೆ ಸಂಬಂಧವಿಲ್ಲದೆ ಆತ್ಮನೇ ಶರೀರವನ್ನು ನಡೆಸುತ್ತಿದೆಯೆನ್ನುವ ವಿಷಯ ಯಾರಿಗೂ ತಿಳಿಯದ ರಹಸ್ಯ. ಶರೀರದಲ್ಲಿ ಜೀವಾತ್ಮ ತಲೆಯಲ್ಲಿ ಒಂದು ಕಡೆ ಇರುವಾಗ, ಆತ್ಮ ಶರೀರವೆಲ್ಲಾ ಅಣುಅಣುವಿನಲ್ಲೂ ವ್ಯಾಪಿಸಿದ್ದು, ಶರೀರವನ್ನು ಕದಲಿಸಿ ಕೆಲಸ ಮಾಡಿಸುತ್ತಾ, ಶರೀರವನ್ನು ನಡೆಸುತ್ತಿದೆ. ಇನ್ನು ಮೂರನೆಯದಾಗಿರುವ ಪರಮಾತ್ಮ, ಜೀವಾತ್ಮ ಆತ್ಮಗಳಿಗೆ ಅತೀತವಾಗಿದ್ದು, ಶರೀರದೊಳಗು ಮತ್ತು ಶರೀರದ ಹೊರಗು ಎಲ್ಲಾ ವ್ಯಾಪಿಸಿದೆ. ವಿಶ್ವವೆಲ್ಲಾ ವ್ಯಾಪಿಸಿರುವ ಪರಮಾತ್ಮ ಆದ ದೇವರು ತಾನು ಏನೂ ಮಾಡದೆ ಎಲ್ಲವನ್ನೂ ಮೌನವಾಗಿ ನೋಡುತ್ತಾ ಇದ್ದಾನೆ. **(ಮೂರು ಆತ್ಮಗಳು ಶರೀರದಲ್ಲಿ ಯಾವ ವಿಧವಾಗಿ ಇರುವುದು ನಾಮ ಮಾತ್ರವಾಗಿ ಹೇಳುತ್ತಿದ್ದೇನೆ. ಮೂರು ಆತ್ಮಗಳ ಪೂರ್ತಿ ವಿಷಯವನ್ನು ತಿಳಿಯಬೇಕೆಂದರೇ, ನಮ್ಮ ರಚನೆಗಳಲ್ಲಿನ "ತ್ರೈತ ಸಿದ್ಧಾಂತ" ವಾಗಲೀ, "ತ್ರೈತ ಸಿದ್ಧಾಂತ ಭಗವದ್ಗೀತೆಯನ್ನಾಗಲೀ" ಓದಿದರೇ ಪೂರ್ತಿ ವಿವರ ತಿಳಿಯುತ್ತದೆ.)**

ಶರೀರದಲ್ಲಿ ಜೀವಾತ್ಮ ಯಾವ ಕೆಲಸವನ್ನು ಮಾಡದೆ, ಕೇವಲ ಕರ್ಮವನ್ನು ಅನುಭವಿಸುತ್ತಾ ಗುಣಚಕ್ರದಲ್ಲಿ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿದ್ದು, ಶರೀರದೊಳಗು ಹೊರಗು ನಡೆಯುವ ಎಲ್ಲ ಕಾರ್ಯಗಳನ್ನೂ ಮಾಡುತ್ತಿದೆ. ಶರೀರವನ್ನು ನಡೆಸುವುದು ಆತ್ಮವೇಯೆಂದು, ಜೀವಾತ್ಮ ಅಲ್ಲವೆಂದು ಹೇಳಬಹುದು. ಪರಮಾತ್ಮ ಶರೀರದೊಳಗು, ಶರೀರದ ಹೊರಗು ಎಲ್ಲಾ ವ್ಯಾಪಿಸಿದ್ದು ಎಲ್ಲದಕ್ಕೂ ಸಾಕ್ಷಿಯಾಗಿ ನೋಡುತ್ತಿದೆ. ಪರಮಾತ್ಮ ಯಾವ ಕೆಲಸವನ್ನೂ ಮಾಡುವವನಲ್ಲ. ಹಾಗೇ ಪರಮಾತ್ಮ ಆದ ದೇವರಿಗೆ ಹೆಸರೂ ಇಲ್ಲ, ರೂಪವೂ ಇಲ್ಲ. ಈ ವಿಧವಾಗಿ ಶರೀರದಲ್ಲಿ ಮೂರು ಆತ್ಮಗಳಿವೆಯೆಂದು ಖುರ್‌ಆನ್ ಗ್ರಂಥದಲ್ಲಿ 50ನೇ ಸೂರಾ, 21ನೇ ಆಯತ್‌ನಲ್ಲಿ ಪ್ರತಿ ಜೀವಿಯೂ ತನ್ನನ್ನು ನಡೆಸುವ ಆತ್ಮನೊಂದಿಗೂ, ಸಾಕ್ಷಿಯಾಗಿರುವ ಪರಮಾತ್ಮನೊಂದಿಗೂ ಸೇರಿ ಪ್ರತಿ ಶರೀರದಲ್ಲೂ ಇದ್ದಾನೆಂದು ಹೇಳುವುದು ನಡೆದಿದೆ. ಈ ವಾಕ್ಯಗಳಲ್ಲಿನ ಸಾರಾಂಶ ನಡೆಸಲ್ಪಡುವವನು ಜೀವಾತ್ಮ, ನಡೆಸುವ ಆತ್ಮ, ಸಾಕ್ಷಿಯಾಗಿರುವ ಪರಮಾತ್ಮ ಎನ್ನುವ ಮೂರು ಆತ್ಮಗಳು ಶರೀರದಲ್ಲಿ ಇವೆಯೆನ್ನುವ ವಿಷಯವನ್ನು ತಿಳಿಸುತ್ತಿದೆ. ಈ ವಾಕ್ಯವನ್ನು ವಿಶದೀಕರಿಸಿ ನೋಡಿದ ನಂತರ ಯಾರಾದರೂ ಮೂರು ಆತ್ಮಗಳ ತ್ರೈತ ಸಿದ್ಧಾಂತ ಖುರ್‌ಆನ್ ಗ್ರಂಥದಲ್ಲಿ ಇಲ್ಲವೆಂದು ಹೇಳಬಲ್ಲಿರಾ? ಹೇಳಲಾರರು. ಒಂದು ವೇಳೆ ಯಾರಾದರೂ ಮೊಂಡುತನದಿಂದ ವಾದಿಸುತ್ತಾ 50ನೇ ಸೂರಾ, 21ನೇ ಆಯತ್‌ನಲ್ಲಿ ವಿವರ ಅದಲ್ಲ ಎಂದರೂ ಅವರು ಯಾವ ವಿಧವಾಗಿಯೂ ಅದಕ್ಕೆ ವಿವರವನ್ನು ಕೊಡಲಾರರು. ಇದು ಶರೀರದಲ್ಲಿನ ಸ್ಥೂಲ ವಿಷಯವಲ್ಲ, ಸೂಕ್ಷ್ಮ ವಿಷಯ. ಖುರ್‌ಆನ್ ಗ್ರಂಥದಲ್ಲಿ **"ಮುಹ್ಕಮಾತ್, ಮುತಷಾಭಿಹಾತ್"** ಎನ್ನುವ ಎರಡು ವಿಧಗಳ ವಾಕ್ಯಗಳು ಇವೆ. ಮುಹ್ಕಮಾತ್ ಎಂದರೇ ಸ್ಥೂಲ ವಿಷಯಗಳಿಂದ ಕೂಡಿಕೊಂಡಿರುವವು ಎಂದು ಅರ್ಥ. ಹಾಗೇ ಮತಷಾಭಿಹಾತ್ ಎಂದರೇ ಸೂಕ್ಷ್ಮ ವಿಷಯಗಳಿಂದ ಕೂಡಿಕೊಂಡಿರುವವೆಂದು ಅರ್ಥ. ಮೂರು ಆತ್ಮಗಳ ವಿವರವನ್ನು ಕೊಡುವ 50ನೇ ಸೂರಾ, 21ನೇ ಆಯತ್ ಪೂರ್ತಿ ಮುತಷಾಭಿಹಾತ್ ವಾಕ್ಯ. ಆದ್ದರಿಂದ ಇದರಲ್ಲಿನ ಸೂಕ್ಷ್ಮ ವಿಷಯಗಳು ಯಾವ ಮನುಷ್ಯನಿಗೂ ಅರ್ಥ

ವಾಗುವುದಿಲ್ಲವೆಂದು, ದೇವರು ಖುರ್‌ಆನ್ ಗ್ರಂಥದಲ್ಲಿ ಮೂರನೇ ಸೂರಾ, ಏಳನೇ ಆಯತ್‌ನಲ್ಲಿ ಹೇಳಿದ್ದಾನೆ. ಅದೇ ವಿಧವಾಗಿ ಐದು ಸಾವಿರ ವರ್ಷಗಳ ಕೆಳಗೆ ಹೇಳಿದ ಭಗವದ್ಗೀತೆಯಲ್ಲಾಗಲೀ, ಎರಡು ಸಾವಿರ ವರ್ಷಗಳ ಕೆಳಗೆ ಹೇಳಿದ ಬೈಬಲ್‌ನಲ್ಲಾಗಲೀ, ಹದಿನಾಲ್ಕು ನೂರು ಸಂವತ್ಸರಗಳ ಕೆಳಗೆ ಹೇಳಿದ ಖುರ್‌ಆನ್ ಗ್ರಂಥದಲ್ಲಾಗಲೀ, ಸೂಕ್ಷ್ಮವಾದ ವಾಕ್ಯಗಳಾಗಿ ಇರುವ ಮೂರು ಆತ್ಮಗಳ ವಿಷಯ ಯಾರಿಗೂ ಅರ್ಥವಾಗಲಿಲ್ಲ.

ದ್ವಿತೀಯ ದೈವ ಗ್ರಂಥವೆಂದು ಹೆಸರುಹೊಂದಿದ ಬೈಬಲ್‌ನಲ್ಲಿ ಮೂರು ಆತ್ಮಗಳ ವಿಷಯ ಹೇಗೆ ಇದೆಯೋ, ಎಲ್ಲಿ ಇದೆಯೋ ವಿವರಿಸಿಕೊಂಡು ನೋಡೋಣ. ಬೈಬಲ್ ಗ್ರಂಥ ಅರವತ್ತಾರು ಸುವಾರ್ತೆಗಳಾಗಿದ್ದರೂ, ಅವುಗಳಲ್ಲಿ ಯೇಸು ಹೇಳಿದ ನಾಲ್ಕು ಸುವಾರ್ತೆಗಳೇ ಮುಖ್ಯವೆಂದು ಬಹಳ ಸಲ ನಾವು ಹೇಳುವುದು ನಡೆದಿದೆ. ಅದರ ಪ್ರಕಾರ ಬೈಬಲ್‌ನಲ್ಲಿರುವ ನಾಲ್ಕು ಸುವಾರ್ತೆಗಳು ಮತ್ತಾಯ, ಮಾರ್ಕ, ಲೂಕಾ, ಯೋಹಾನ್ ಎನ್ನುವವು ಇವೆ. ಅದರಲ್ಲಿ ಮತ್ತಾಯ ಸುವಾರ್ತೆ ಕೊನೆಯ 28ನೇ ಅಧ್ಯಾಯದಲ್ಲಿ 19ನೇ ವಾಕ್ಯ ಹೀಗೆ ಇದೆ. **"ತಂದೆ ವೊಂದರ, ಕುಮಾರನೊಂದರ, ಪರಿಶುದ್ಧಾತ್ಮ ವೊಂದರ ನಾಮಗಳೊಳಗೆ ಅವರಿಗೆ ಬಾಪ್ತಿಸ್ಮ ಕೊಡುವೆವು"** ಇಲ್ಲಿ ತಂದೆ ಆತ್ಮಯೆಂದೂ, ಕುಮಾರನು ಜೀವಾತ್ಮಯೆಂದೂ, ದೇವರನ್ನು ಪರಿಶುದ್ಧಾತ್ಮಯೆಂದೂ ಲೆಕ್ಕಿಸಬೇಕು. ತಂದೆ ಅಧೀನದಲ್ಲಿ ಇರುವವನು ಕುಮಾರನು. ಆತ್ಮ ಅಧೀನದಲ್ಲಿರುವುದು ಜೀವಾತ್ಮ. ಹಾಗೇ ಆತ್ಮ, ಜೀವಾತ್ಮ ಎರಡಕ್ಕೂ ಅಧಿಪತಿ ಆಗಿರುವುದು ಪರಮಾತ್ಮ ಆದ್ದರಿಂದ ತಂದೆ ಕುಮಾರನನ್ನು ಮೀರಿ, ಅವರ ಇಬ್ಬರಲ್ಲಿ ಪರಮಾತ್ಮನಾದ ಪರಿಶುದ್ಧಾತ್ಮ ಇದೆಯೆಂದು ಈ ವಾಕ್ಯದಲ್ಲಿ ಹೇಳಲಾಗಿದೆ. ಆತ್ಮಗಳು ಸೂಕ್ಷ್ಮವಾದವು, ಶರೀರ ಸ್ಥೂಲವಾದದ್ದು. ಸೂಕ್ಷ್ಮವಾದ ಆತ್ಮ ವಿಷಯಗಳು ಸುಲಭವಾಗಿ ಅರ್ಥವಾಗುವವಲ್ಲ. ಆದ್ದರಿಂದ ಬೈಬಲ್‌ನಲ್ಲಿನ ತಂದೆ, ಕುಮಾರನು ಪರಿಶುದ್ಧಾತ್ಮ ವೊಂದರ ವಿವರ ಬಹುಶಃ ಯಾವ ಕ್ರೈಸ್ತನಿಗೂ ಅರ್ಥ ವಾಗಿರುವುದಿಲ್ಲವೆಂದು ಅಂದುಕೊಳ್ಳುತ್ತೇನೆ. ಈ ವಾಕ್ಯಗಳು ಅರ್ಥವಾಗದಂತೆ

ಕಷ್ಟವಾಗಿ ಇರುವವೆಂದು ತಿಳಿಯುವುದಕ್ಕೆ ಬೈಬಲ್‌ನಲ್ಲಿನ ಯೋಹಾನ್ ಬರೆದ ಮೊದಲನೆಯ ಪತ್ರಿಕೆ ಐದನೇ ಅಧ್ಯಾಯದಲ್ಲಿ 7, 8, 9, 10 ವಾಕ್ಯಗಳು ಹೀಗೆ ಇವೆ. **"ಸಾಕ್ಷಿ ಕೊಡುವವರು ಮೂವರು, ಆತ್ಮಯು, ನೀರು, ರಕ್ತ, ಈ ಮೂವರೂ ಏಕೀಭವಿಸಿದ್ದಾರೆ. ನಾವು ಮನುಷ್ಯರ ಸಾಕ್ಷಿಯನ್ನು ಅಂಗೀಕರಿಸುತ್ತಿದ್ದೇವೆ ಅಲ್ಲವೆ! ದೇವರ ಸಾಕ್ಷಿ ಮತ್ತಷ್ಟು ಬಲವಾದದ್ದು. ದೇವರ ಸಾಕ್ಷಿ ಆತನ ಕುಮಾರನನ್ನು ಕುರಿತು ಕೊಟ್ಟಿರುವುದೇ. ದೇವರ ಕುಮಾರನಲ್ಲಿ ವಿಶ್ವಾಸವಿಡುವವನು ತನ್ನಲ್ಲೇ ಈ ಸಾಕ್ಷಿ ಹೊಂದಿದ್ದಾನೆ."** ಇಲ್ಲಿ ಈ ನಾಲ್ಕು ವಾಕ್ಯಗಳನ್ನು ನೋಡಿದರೆ ನಮ್ಮ ಶರೀರದಲ್ಲಿನ ಮೂರು ಆತ್ಮಗಳ ವಿಷಯವೆಂದು ಯಾರಿಗೂ ಅರ್ಥವಾಗುವುದಿಲ್ಲ. ಸಾಕ್ಷಿ ಕೊಡುವವರು ಮೂವರು ಎಂದಾಗ, ಮೂವರು ಯಾರನ್ನು ನೋಡಿದರೆ ಆತ್ಮ, ನೀರು, ರಕ್ತ ಎಂದು ಹೇಳಲಾಗಿದೆ. ನೀರನ್ನು, ರಕ್ತವನ್ನು, ಆತ್ಮನನ್ನು ಮೂವರನ್ನು ಏಕೆ ಹೇಳಿದ್ದಾರೋ ಯಾರಿಗೂ ಅರ್ಥವಾಗಲಿಲ್ಲವೆಂದೇ ಹೇಳಬಹುದು. ಈ ವಿಧವಾಗಿ ಇರುವುದರಿಂದ ಆತ್ಮ ವಿಷಯಗಳು ಸೂಕ್ಷ್ಮವಾದವೆಂದು, ಯಾರಿಗೂ ಅರ್ಥವಾಗದ ವಿಧವಾಗಿ ಇರುತ್ತವೆಂದು ಹೇಳಬಹುದು. ಈ ಸೂಕ್ಷ್ಮ ವಿಷಯಗಳನ್ನು ಯಾವ ಮನುಷ್ಯರು ಅರ್ಥ ಮಾಡಿಕೊಳ್ಳಲಾರರೆಂದು ದೇವರೇ ಒಂದು ಕಡೆ ಹೇಳಿದ್ದಾನೆ ಆದ್ದರಿಂದ, ಆತ್ಮ ವಿಷಯಗಳು ಅರ್ಥವಾಗದಂತೆ ಇರುತ್ತವೆಂದು ಹೇಳಬಹುದು. ದೇವರೇ ಅರ್ಥವಾಗುವುದಿಲ್ಲವೆಂದು ಹೇಳಿದಾಗ, ಅವುಗಳಿಂದ ನಮಗೇನು ಕೆಲಸವೆಂದು ಯಾರೂ ಅಂದುಕೊಳ್ಳದಂತೆ, ಭಕ್ತಿ ಶ್ರದ್ಧೆ ಇರುವವರು ತಿಳಿದುಕೊಳ್ಳಬಹುದೆಂದು ದೇವರು ಪಕ್ಕದಲ್ಲೇ ಹೇಳಿದ್ದಾನೆ. ಆದ್ದರಿಂದ ಕಷ್ಟವಾದ ಆತ್ಮ ವಿಷಯವನ್ನು ಶ್ರದ್ಧೆ ಹೊಂದಿರುವುದರಿಂದ ತಿಳಿಯಬಹುದೆಂದು ತಿಳಿಯುತ್ತಿದೆ. ಈ ಮಾತುಗಳು ನನ್ನವಲ್ಲ. ಖುರ್‌ಆನ್ ಗ್ರಂಥದಲ್ಲಿ ಮೂರನೆಯ ಸೂರಾ, ಏಳನೆಯ ಆಯತ್‌ನಲ್ಲಿ ಹೇಳಲಾಗಿವೆ. ಅದೇ ವಿಷಯವನ್ನೇ ಭಗವದ್ಗೀತೆಯಲ್ಲಿ ಜ್ಞಾನಯೋಗವೆನ್ನುವ ಅಧ್ಯಾಯದಲ್ಲಿ 39ನೇ ಶ್ಲೋಕದಲ್ಲಿ ಭಗವಂತನು **"ಶ್ರದ್ಧಾವಾನ್ ಲಭತೇ ಜ್ಞಾನಮ್"** ಎಂದು ಹೇಳಿದ್ದಾನೆ. ಇದನ್ನನುಸರಿಸಿ ಶ್ರದ್ಧೆ ಇರುವವನು ದೇವರು ಹೇಳಿದ್ದನ್ನು

ಗ್ರಹಿಸಬಹುದೆಂದು ತಿಳಿಯುತ್ತಿದೆ. ಭಗವದ್ಗೀತೆ ವಾಕ್ಯಕ್ಕೆ ಅನುಕೂಲವಾಗಿ ಖುರ್‌ಆನ್‌ನಲ್ಲಿ 3ನೇ ಸೂರಾ 7ನೇ ಆಯತ್‌ನಲ್ಲಿ ಹೀಗೆ ಇದೆ. **"ನಿನ್ನ ಮೇಲೆ ಗ್ರಂಥವನ್ನು ಅವತರಿಸುವಂತೆ ಮಾಡಿದವನು ದೇವರೇ. ಇದರಲ್ಲಿ ಸುಲಭವಾಗಿ ಅರ್ಥವಾಗುವ ಮುಹ್ಕಮಾತ್ (ಸ್ಥೂಲವಾದ) ವಚನಗಳು ಇವೆ. ಅವು ಗ್ರಂಥಕ್ಕೆ ಮೂಲ. ಮತ್ತೆ ಕೆಲವು ಸುಲಭವಾಗಿ ಅರ್ಥವಾಗದ ಮುತಷಾಭಿಹಾತ್ (ಸೂಕ್ಷ್ಮವಾದ ಅರ್ಥವನ್ನು ಕೊಡುವ) ವಾಕ್ಯಗಳಿವೆ. ಹೃದಯಗಳಲ್ಲಿ ವಕ್ರತೆ ಇರುವವರು (ಅಜ್ಞಾನದಿಂದ ತುಂಬಿದ ಮೆದುಳು ಇರುವವರು) ಸೂಕ್ಷ್ಮವಾದ ಅರ್ಥವನ್ನು ಕೊಡುವ ಮುತಷಾಭಿಹಾತ್ ವಾಕ್ಯಗಳ ಹಿಂದೆ ಬಿದ್ದು, ಅವರ ಅಜ್ಞಾನ ಭಾವಗಳಿಂದ ಪ್ರಜೆಗಳನ್ನು ಅಜ್ಞಾನ ಮಾರ್ಗವಾದ ವಕ್ರಮಾರ್ಗವನ್ನು ಹಿಡಿಸುತ್ತಾರೆ. ನಿಜಕ್ಕೆ ಆ ವಾಕ್ಯಗಳ ವಾಸ್ತವ ಅರ್ಥ ದೇವರಿಗೆ ಹೊರತು ಇತರ ಮನುಷ್ಯರಿಗೆ ಯಾರಿಗೂ ತಿಳಿಯದು. ಆದರೇ ಜ್ಞಾನದ ಮೇಲೆ ಶ್ರದ್ಧೆ ಇರುವವರು ಅವುಗಳ ಅರ್ಥವನ್ನು ತಿಳಿದಿದ್ದೇವೆ ಎನ್ನುತ್ತಾರೆ. ಭಕ್ತಿ ಶ್ರದ್ಧೆ ಇರುವವರು ಮಾತ್ರವೇ ದೇವರು ಹೇಳಿದ ಸೂಕ್ಷ್ಮ ಭಾವವಿರುವ ಹಿತಬೋಧನೆ ವಾಕ್ಯಗಳನ್ನು ಗ್ರಹಿಸಬಲ್ಲರು."**

ಮೇಲಿನ ವಾಕ್ಯದಲ್ಲಿ ಭಗವದ್ಗೀತೆಯಲ್ಲಿ ಹೇಳಿದಹಾಗೆ ಶ್ರದ್ಧೆ ಇರುವವರು ದೇವರ ಜ್ಞಾನ ವಾಕ್ಯವನ್ನು ಯಾವುದನ್ನಾದರೂ ಗ್ರಹಿಸಬಲ್ಲರೆಂದು ತಿಳಿಯುತ್ತದೆ. ಆದರೇ ಅಜ್ಞಾನ ಭಾವನೆಗಳು ಇರುವವರು, ಅರ್ಥವಾಗದ ಸೂಕ್ಷ್ಮ ಭಾವನೆಗಳು ಇರುವ ವಾಕ್ಯಗಳಿಗೆ, ಅವರ ಮನೋಭಾವದ ಪ್ರಕಾರ ಅಜ್ಞಾನದಿಂದ ಕೂಡಿಕೊಂಡ ಅರ್ಥಗಳನ್ನು ಹೇಳಿ, ಪ್ರಜೆಗಳನ್ನು ದೇವರ ಮಾರ್ಗದಿಂದ ಪಕ್ಕ ಮಾರ್ಗಕ್ಕೆ ಮರಳಿಸಬಲ್ಲರು. ಆದ್ದರಿಂದ ದೇವರು ಹೇಳಿದ ವಾಕ್ಯಗಳನ್ನು ದೇವರು ಹೊರತು ತಿಳಿದವರು ಯಾರೂ ಇಲ್ಲ. ದೇವರ ಜ್ಞಾನ ದೇವರಿಗೆ ಹೊರತು ಇತರ ಮನುಷ್ಯನಿಗೆ ಯಾರಿಗೂ ತಿಳಿದಿಲ್ಲವಾದ್ದರಿಂದ, ಜ್ಞಾನದ ಮೇಲೆ ಶ್ರದ್ಧೆ ಇರುವವರು, ದೇವರ ಜ್ಞಾನವನ್ನು ತಿಳಿಯಬೇಕೆನ್ನುವ ಗಾಢವಾದ ಬುದ್ಧಿ ಇರುವವರು ದೇವರು ತಿಳಿಸಿದಾಗಲೇ ಆ ವಿಷಯವನ್ನು ಗ್ರಹಿಸಬಲ್ಲರು.

ಮೂರು ಆತ್ಮಗಳ ವಿಷಯಗಳು ದೇವರು ತನ್ನ ಗ್ರಂಥಗಳಾದ ಮೂರರಲ್ಲಿ ಹೇಳಿರುವುದರಿಂದ ಅವುಗಳನ್ನು ಶ್ರದ್ಧಾ, ಬುದ್ಧಿ ಇರುವವರು ಗ್ರಹಿಸಬಹುದು. ಶ್ರದ್ಧಾ, ಬುದ್ಧಿ ಇಲ್ಲದವರು ಗ್ರಹಿಸಲಾರರೆಂದು ತಿಳಿಯುತ್ತಿದೆ. ಇಷ್ಟು ಕಾಲ ಮೂರು ಗ್ರಂಥಗಳಲ್ಲಿ ಕತ್ತಲಮಯವಾಗಿ ಯಾರಿಗೂ ಕಾಣಿಸದೇ, ಯಾರಿಗೂ ತಿಳಿಯದಂತಿರುವ ಮೂರು ಆತ್ಮಗಳು, ಪೂರ್ತಿ ಶ್ರದ್ಧೆ ಇಲ್ಲದ ಕಾರಣದಿಂದ ಯಾರಿಗೂ ತಿಳಿಯದಂತೆ ಹೋಗಿವೆ ಎಂದು ಹೇಳಬಹುದು. ಸಾವಿರ, ನೂರು ಸಂವತ್ಸರಗಳು ಕಳೆದರೂ, ಮೂರು ಆತ್ಮಗಳ ವಿಷಯ ತಿಳಿಯದಂತೆ ಇರುವುದರಿಂದ, ಕೊನೆಗೆ ದೇವರೇ ನಮಗೆ ಜ್ಞಾನದ ಮೇಲೆ ಶ್ರದ್ಧೆಯನ್ನು ಕೊಟ್ಟು, ಮೂರು ಆತ್ಮಗಳ ವಿಷಯ ಈಗ ತಿಳಿಸಿದ್ದಾನೆಂದು ಅಂದುಕೊಳ್ಳೋಣ. ಮೂರು ಆತ್ಮಗಳು ಮೂರು ರಾತ್ರಿಗಳಾಗಿ, ಏನೂ ತಿಳಿಯದ ಕತ್ತಲಮಯವಾಗಿ ಭಗವದ್ಗೀತೆಯಲ್ಲಿ ಇರುವುದರಿಂದ ಭಗವದ್ಗೀತೆಯನ್ನು ತೌರಾತು (ಮೂರು ರಾತ್ರಿಗಳು) ಎಂದು ಹೇಳುವುದು ನಡೆದಿದೆ. ಭಗವದ್ಗೀತೆ ಮಾತ್ರ ತೌರಾತ್ ಗ್ರಂಥವಾ ಎಂದು ಆಲೋಚಿಸಿದರೆ, ಗೀತೆಯನ್ನು ಅನುಸರಿಸಿ ಹುಟ್ಟಿದ ಉಳಿದ ಎರಡು ಗ್ರಂಥಗಳು ಸಹ ತೌರಾತು ಗ್ರಂಥಗಳೇ ಎಂದು ಹೇಳಬಹುದು. ಏಕೆಂದರೆ! ಉಳಿದ ಎರಡು ಗ್ರಂಥಗಳು ಸಹ ಮುಖ್ಯವಾಗಿ ಮೂರು ಆತ್ಮಗಳ ವಿಷಯವನ್ನು ತಿಳಿಸುತ್ತಿವೆ. ಆದ್ದರಿಂದ ಬೈಬಲ್, ಖುರ್‌ಆನ್ ಗ್ರಂಥಗಳಿಗೆ ಸಹ ಆ ಹೆಸರು ಅನ್ವಯಿಸಬಲ್ಲದು ಆದರೆ, ಮೊದಲ ಗ್ರಂಥಕ್ಕೆ ಮರ್ಯಾದೆ ಕೊಟ್ಟು, ಅದಕ್ಕೆ ಸಮಾನವಾದ ಹೆಸರು ಇಟ್ಟುಕೊಳ್ಳುವುದು ಒಳ್ಳೆಯದಲ್ಲವೆಂದು, ಉಳಿದ ಎರಡು ಗ್ರಂಥಗಳಿಗು ತೌರಾತು ಎಂದು ಹೆಸರು ಇಡಲಿಲ್ಲ.

ದ್ವಿತೀಯ ದೈವ ಗ್ರಂಥವನ್ನು ನಾವು ಈ ದಿನ ಬೈಬಲ್ ಎಂದು ಹೇಳುತ್ತಿದ್ದರೂ, **ಭಗವದ್ಗೀತೆಗೆ ದೇವರು 'ತೌರಾತ್' ಗ್ರಂಥವೆಂದು ಹೆಸರು ಇಟ್ಟಹಾಗೆ, ಬೈಬಲ್ ಗ್ರಂಥಕ್ಕೂ 'ಇಂಜೀಲು' ಎಂದು ಹೆಸರು ಇಟ್ಟಿದ್ದಾನೆ.** ದೇವರ ಭಾಷೆಯಲ್ಲಿ ಅದರ ಅರ್ಥವೇನೋ ನನಗೆ ತಿಳಿದಿಲ್ಲ ಆದರೆ, ದೈವಜ್ಞಾನಕ್ಕೆ ಹತ್ತಿರವಾಗಿರುವ ಭಾಷೆಯಾದ ತೆಲುಗು ಭಾಷೆಯಲ್ಲಿ ದೈವಜ್ಞಾನಕ್ಕೆ ಸಂಬಂಧಿಸಿದ

ಅರ್ಥವೇ ಇದೆ. ಜ್ಞಾನಕ್ಕೆ ಚಿಹ್ನೆ, ಜ್ಞಾನಕ್ಕೆ ಅಧಿಪತಿಯಾದ ಚಂದ್ರನನ್ನು ಇಂದೂ ಎಂದು ಹೇಳಬಹುದು. ಚಂದ್ರಕಿರಣಗಳನ್ನು ಇಂದೂಜಗಳು ಎಂದು ಹೇಳಬಹುದು. ಇಂದೂನಿಂದ ಹುಟ್ಟಿರುವವು ಆದ್ದರಿಂದ 'ಜಾ' ಎನ್ನುವ ಶಬ್ಧವನ್ನು ಸೇರಿಸಿ ಇಂದೂಜಗಳು ಎಂದು ಹೇಳುವುದು ನಡೆಯುತ್ತಿದೆ. ಇಂದೂಜಗಳು ಎನ್ನುವ ಪದಕ್ಕೆ ಹತ್ತಿರವಾಗಿರುವ ಶಬ್ದ ಇಂಜೀಲು ಎನ್ನುವ ಶಬ್ಧ. ಇಂದೂ ಎನ್ನದಂತೆ ಕೊನೆಯಲ್ಲಿ 'ದೂ' ನ್ನು ತೆಗೆದುಹಾಕಿ 'ಇಂ' ಎಂದು ಹೇಳಿದರೂ ಚಂದ್ರನೆಂದೇ ಅರ್ಥ ಬರುತ್ತದೆ. ಅಷ್ಟೇ ಅಲ್ಲದೆ 'ಜಾ' ಎನ್ನುವ ಶಬ್ದ 'ಜೀ' ಎಂದು ಹೇಳಿದರೂ ಜೀವಿಸುವುದು, ಹುಟ್ಟುವುದು ಎಂದು 'ಜಾ' ಗಿರುವ ಅರ್ಥವೆ ಬರುತ್ತದೆ. ಆದ್ದರಿಂದ 'ಇಂದೂಜಾ' ಎನ್ನುವ ಪದವನ್ನು ಇಂಜಾ ಎಂದೂ, ಇಂಜೀ ಎಂದೂ ಅರ್ಥ ಕೆಡದಂತೆ ಹೇಳಬಹುದು. ಆದ್ದರಿಂದ ಇಂಜೀಗಳು ಎಂದರೆ ಚಂದ್ರ ಕಿರಣಗಳು ಎಂದು ಸ್ಥೂಲ ಅರ್ಥವಾದಾಗ, ದೇವರ ಜ್ಞಾನ ವಾಕ್ಯಗಳೆಂದು ಸೂಕ್ಷ್ಮವಾದ ಅರ್ಥ ಬರುತ್ತದೆ. ದೇವರ ಜ್ಞಾನ ವಾಕ್ಯಗಳಿಂದ ಕೂಡಿಕೊಂಡ ಗ್ರಂಥವನ್ನು ಇಂಜೀಲು ಎಂದು ಹೇಳಬಹುದು. ಆದ್ದರಿಂದ ದ್ವಿತೀಯ ದೈವ ಗ್ರಂಥವಾದ ಬೈಬಲ್‌ನ್ನು ಇಂಜೀಲ್ ಗ್ರಂಥವೆಂದು ಜ್ಞಾನಿಯಾದ ಜಿಬ್ರಯೇಲ್ ಗ್ರಹ ಹೇಳಿದೆ. ಭಗವದ್ಗೀತೆಯನ್ನು ತೌರಾತು ಗ್ರಂಥವೆಂದು ಕರೆದಾಗ, ಬೈಬಲ್‌ನ್ನು ಇಂಜೀಲ್ ಗ್ರಂಥವೆಂದು ಕರೆಯಲಾಯಿತು. ಈ ವಿಧವಾಗಿ ಮೂರು ಗ್ರಂಥಗಳು ಒಂದೇ ವಂಶದಿಂದ ಹುಟ್ಟಿದ ಸೋದರರ ಹಾಗೆ ಒಂದೇ ಜ್ಞಾನವನ್ನು ತಿಳಿಸುತ್ತಿವೆ. ಈ ವಿಷಯವನ್ನು ತಿಳಿಯದ ಮನುಷ್ಯರು ಮೂರು ಗ್ರಂಥಗಳನ್ನು ಆಧಾರ ಮಾಡಿಕೊಂಡು ಮೂರು ಮತಗಳನ್ನು ಸೃಷ್ಠಿಸಿಕೊಂಡಿದ್ದಾರೆ. ಈಗ ಹೇಳಿ ದೇವರು ಮತಗಳನ್ನು ಸೃಷ್ಠಿಸಿದ್ದಾನಾ? ದೇವರು ತನ್ನ ಜ್ಞಾನವನ್ನು ಮೂರು ಗ್ರಂಥಗಳಲ್ಲಿ ತುಂಬಿ ಕಳುಹಿಸಿದ್ದಾನೆ. ಆದರೇ ಮನುಷ್ಯ ಅವುಗಳನ್ನು ಮತಗಳಾಗಿ ಬದಲಾಯಿಸಿಕೊಂಡಿದ್ದಾನೆ. ದೇವರು ಮನುಷ್ಯನಿಗೆ ಜ್ಞಾನವನ್ನು ಕೊಟ್ಟು ಮೂರು ಆತ್ಮಗಳನ್ನು ತಿಳಿದುಕೊ ಎಂದಿದ್ದಾನೆ. ಆದರೆ ಮನುಷ್ಯ ಮೂರು ಆತ್ಮಗಳನ್ನು ತಿಳಿದುಕೊಳ್ಳಲಿಲ್ಲ. ಸುಮಾರು ಪ್ರಪಂಚ ವ್ಯಾಪ್ತವಾಗಿ ಮೂವತ್ತು ಮತಗಳನ್ನು ತಯಾರು ಮಾಡಿಕೊಂಡಿದ್ದಾನೆ. ದೇವರು

ಮೂರು ಗ್ರಂಥಗಳನ್ನು ಕೊಟ್ಟರೇ ಮನುಷ್ಯ ಮೂರು ಗ್ರಂಥಗಳಿಗೆ ಮೂರು ಮತಗಳನ್ನು ಅಂಟಿಸಿದ್ದಾನೆ.

ಮನುಷ್ಯ ಎಷ್ಟು ಮತಗಳನ್ನು ಸೃಷ್ಟಿಸಿಕೊಂಡರೂ ಅವೆಲ್ಲವೂ ದೇವರಿಗೆ ತಿಳಿಯದಂತೆ ಯಾವುದೂ ನಡೆದಿಲ್ಲ. ಭೂಮಿ ಮೇಲೆ ಎಷ್ಟು ಮತಗಳಿದ್ದರೂ ಮೂರು ಗ್ರಂಥಗಳನ್ನು ಆಧಾರ ಮಾಡಿಕೊಂಡು ತಯಾರಾದ ಇಂದೂ, ಇಸ್ಲಾಮ್, ಕ್ರೈಸ್ತ ಎನ್ನುವ ಮೂರು ಮತಗಳನ್ನೇ ಮುಖ್ಯವಾಗಿ ಹೇಳಿ ಕೊಳ್ಳುತ್ತಿದ್ದೇವೆ. ದೇವರುಕೊಟ್ಟ ಮೂರು ಗ್ರಂಥಗಳನ್ನು ತೋರಿಸುತ್ತಿರುವ ಮೂರು ಮತಗಳೇ ಎಲ್ಲ ಮತಗಳಲ್ಲಿ ಮುಖ್ಯವಾದವೆಂದು ಹೇಳಬಹುದು. ಭೂಮಿಮೇಲೆ ಮನುಷ್ಯ ಕೆಲವು ವಿಷಯಗಳಲ್ಲಿ ಸ್ವತಂತ್ರನು, ಮತ್ತೆ ಕೆಲವು ವಿಷಯಗಳಲ್ಲಿ ಅಸ್ವತಂತ್ರನು. ಮಾಯೆಗೆ ಸಂಬಂಧಿಸಿದ ವಿಷಯಗಳಲ್ಲಾಗಲೀ, ಪ್ರಕೃತಿಗೆ ಸಂಬಂಧಿಸಿದ ವಿಷಯಗಳಲ್ಲಾಗಲೀ, ಕರ್ಮಕ್ಕೆ ಸಂಬಂಧಿಸಿದ ವಿಷಯ ಗಳಲ್ಲಾಗಲೀ ಮನುಷ್ಯ ಸ್ವತಂತ್ರನಲ್ಲ. ಒಂದು ದೇವರ ವಿಷಯದಲ್ಲಿ ಹೊರತು ಉಳಿದ ಎಲ್ಲ ವಿಷಯಗಳಲ್ಲೂ ಮನುಷ್ಯ ಸ್ವತಂತ್ರನಲ್ಲ. ಜೀವಿಯು (ಜೀವಾತ್ಮ) ಸಹ ಒಂದು ಆತ್ಮನೇ ಆದ್ದರಿಂದ ಆತ್ಮ ವಿಷಯಗಳಾದರೂ, ಪರಮಾತ್ಮ (ದೇವರ) ವಿಷಯಗಳಾದರೂ ಜೀವಿಗೆ ಸ್ವಂತ ವಿಷಯಗಳಾಗಿ ಲೆಕ್ಕಿಸಲಾಗುತ್ತವೆ. ಸ್ವಂತ ವಿಷಯಗಳಾದ ಆತ್ಮ ಸಂಬಂಧ ವಿಷಯಗಳಲ್ಲಿ ಜೀವಾತ್ಮಕ್ಕೆ ಸ್ವತಂತ್ರತೆ ಇದೆಯಾಗಲೀ, ಆತ್ಮಗಳ ವಿಷಯ ಹೊರತು ಉಳಿದ ವಿಷಯಗಳೆಲ್ಲವುಗಳಲ್ಲಿ ಮನುಷ್ಯನಿಗೆ (ಜೀವಿಗೆ) ಸ್ವತಂತ್ರತೆ ಇಲ್ಲ.

ಈಗ ಅಸಲು ವಿಷಯಕ್ಕೆ ಬಂದು ನೋಡಿದರೇ, ಮತ ಎನ್ನುವುದು ಮಾಯೆಗೆ ಸಂಬಂಧಿಸಿರುವುದು, ಅಜ್ಞಾನ ಸಂಬಂಧವಾದದ್ದು. ದೇವರ ವಿಷಯ ಅಲ್ಲವೇ ಅಲ್ಲ. ಹಾಗಿರುವಾಗ ದೇವರ ವಿಷಯದಲ್ಲಿ ಹೊರತು ಉಳಿದ ಎಲ್ಲ ವಿಷಯಗಳಲ್ಲೂ ಜೀವಾತ್ಮ ಸ್ವತಂತ್ರನು ಆಗದಿರುವಾಗ, ಮನುಷ್ಯ ಮತವನ್ನು ತಯಾರು ಮಾಡಿದ್ದಾನಾ? ಎನ್ನುವ ಪ್ರಶ್ನೆ ಬಾರದೆ ಇರುವುದಿಲ್ಲ. ಈ ಪ್ರಶ್ನೆಗೆ ಸರಿಯಾದ ಉತ್ತರವನ್ನು ಹೇಳಿದರೇ, ಯಾವ ಮನುಷ್ಯ ಮತವನ್ನು ತಯಾರು

ಮಾಡಲಿಲ್ಲ. ಮತವನ್ನು ತಯಾರು ಮಾಡುವ ಸ್ವತಂತ್ರತೆ ಮನುಷ್ಯನಿಗೆ ಇಲ್ಲ. ಮನುಷ್ಯನಿಗೆ ತಿಳಿಯದಂತೆ ಅಂದರೆ ಜೀವಾತ್ಮಕ್ಕೆ ತಿಳಿಯದಂತೆ ಜೀವಾತ್ಮನ ಹಿಂದೆ ಇರುವ ಆತ್ಮವೇ ಮನುಷ್ಯನನ್ನು ಹೇಗೆ ಆಡಿಸಬೇಕೋ ಹಾಗೆ ಆಡಿಸಿ ಮತವನ್ನು ತಯಾರು ಮಾಡಿದೆ. ಶರೀರದಲ್ಲಿನ ಆತ್ಮ ಏನು ಕೆಲಸ ಮಾಡುತ್ತಿದೆಯೋ ತಿಳಿಯದವರಿಗೆ, ಮನುಷ್ಯನೇ ಮತವನ್ನು ತಯಾರು ಮಾಡಿದಹಾಗೆ ಕಾಣಿಸುತ್ತಿದೆ. ಮೇಲ್ನೋಟಕ್ಕೆ ಮನುಷ್ಯ ಕಾಣಿಸಿದರೂ, ತೆರೆ ಹಿಂಬದಿಯಿರುವ ಆತ್ಮವೇ ಮತಗಳನ್ನು ತಯಾರು ಮಾಡಿದೆ. ವಾಸ್ತವಕ್ಕೆ ಶರೀರದಲ್ಲಿನ ಆತ್ಮ ಕಾರ್ಯಗಳು ತಿಳಿಯದೆ ಹೋಗಿರುವುದರಿಂದ, ತಾನೇ ಮತಕ್ಕೆ ಕರ್ತನೆಂದು ಮನುಷ್ಯ ಹೇಳಿಕೊಳ್ಳುತ್ತಿದ್ದಾನೆ. ಮತ ಮಾಯೆಗೆ ಸಂಬಂಧಿಸಿರುವುದು ಆದ್ದರಿಂದ, ಆ ವಿಷಯದಲ್ಲಿ ಜೀವಿಯು ಸ್ವತಂತ್ರನು ಅಲ್ಲವೆಂದು ತಿಳಿದುಹೋಯಿತು. ದೇವರ ವಿಷಯದಲ್ಲಿ ಎಂದರೆ ಆತ್ಮಗಳ ವಿಷಯದಲ್ಲಿ ಜೀವಾತ್ಮ ಸ್ವತಂತ್ರನು ಆದ್ದರಿಂದ, ಜ್ಞಾನ ವಿಷಯದೊಳಗೆ ಹೋಗುವುದೋ, ಹೋಗದೆ ಇರುವುದೋ ಜೀವಾತ್ಮನ ಇಷ್ಟ ಅಯಿಷ್ಟಗಳ ಮೇಲೆ ಆಧಾರಪಟ್ಟಿರುತ್ತವೆ. ಮತದ ಹಿಂದೆ ಇರುವ ಗ್ರಂಥಗಳನ್ನನುಸರಿಸಿ ಮೂರು ಮತಗಳು ಜ್ಞಾನದೊಂದಿಗೆ ಸಂಬಂಧಪಟ್ಟಿವೆಯೆಂದು ಹೇಳಬಹುದು. ಮತ ಮಾಯೆ ಆದರೂ ಪ್ರತ್ಯೇಕಿಸಿ ಎಲ್ಲ ಮತಗಳಿಗಿಂತ ಇಂದೂ, ಇಸ್ಲಾಮ್, ಕ್ರೈಸ್ತಗಳಲ್ಲಿ ಸ್ವಲ್ಪ ಜ್ಞಾನವಿದೆಯೆಂದು ಹೇಳಬಹುದು. ಮತವನ್ನು ನೋಡದಂತೆ ಮತದ ಹಿಂದಿರುವ ಗ್ರಂಥವನ್ನು ನೋಡಿದರೆ, ಆ ಮತ ಜ್ಞಾನದಿಂದ ಕೂಡಿಕೊಂಡಿರುವುದಾಗುತ್ತದೆ. ಗ್ರಂಥವನ್ನು ಬಿಟ್ಟು ಮತವನ್ನು ಮಾತ್ರ ನೋಡಿದರೆ, ಆ ಮತ ಅಜ್ಞಾನದಿಂದ ಕೂಡಿಕೊಂಡಿರುವುದಾಗುತ್ತದೆ. ಮೂರು ಮತಗಳಲ್ಲಿ ಯಾವ ಮತದವನಾದರೂ, ಮತದ ಮೇಲೆ ಧ್ಯಾಸವನ್ನು ಬಿಟ್ಟು ಅದಕ್ಕೆ ಸಂಬಂಧಿಸಿದ ಗ್ರಂಥದ ಮೇಲೆ ಧ್ಯಾಸ ಇಟ್ಟುಕೊಂಡಾಗ, ಅವನು ಜ್ಞಾನಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆ. ಗ್ರಂಥದ ಮೇಲೆ ಧ್ಯಾಸವನ್ನು ಬಿಟ್ಟು, ಅದಕ್ಕೆ ಸಂಬಂಧಿಸಿದ ಮತದ ಮೇಲೆ ಧ್ಯಾಸ ಇಟ್ಟುಕೊಂಡವನು, ಅಜ್ಞಾನ ಮಾರ್ಗದಲ್ಲಿ ಪ್ರಯಾಣಿಸಿದಂತಾಗುತ್ತದೆ.

ಮತ ಮನುಷ್ಯನಿಗೆ ಸಂಬಂಧವಿಲ್ಲ, ಜ್ಞಾನವೇ ಮನುಷ್ಯನಿಗೆ ಸಂಬಂಧವೆಂದು ಹೇಳಿಕೊಂಡಿದ್ದೇವೆ. ಯಾವ ಮನುಷ್ಯನೂ ಒಂದು ಮತವನ್ನು ತಯಾರು ಮಾಡುವ ಸ್ವತಂತ್ರನಲ್ಲ. ಅದು ಮನುಷ್ಯನಿಗೆ ಸಾಧ್ಯವಾಗುವುದಿಲ್ಲ, ಮನುಷ್ಯ ಮತಕ್ಕೆ ಸೃಷ್ಠಿಕರ್ತ ಆಗಲಾರನು. ಮನುಷ್ಯ ಜ್ಞಾನವನ್ನು ಆಯ್ಕೆ ಮಾಡಿಕೊಳ್ಳುವುದರಲ್ಲಿ ಸ್ವತಂತ್ರನು. ದೈವಜ್ಞಾನದ ಕಡೆ ಮನುಷ್ಯ ಸ್ವತಃವಾಗಿ ಪ್ರಯಾಣ ಮಾಡುವ ಸ್ವತಂತ್ರನು. ಆದ್ದರಿಂದ ಮನುಷ್ಯ ತನ್ನ ಇಷ್ಟದ ಪ್ರಕಾರ ಜ್ಞಾನವನ್ನು ತಿಳಿಯಬಲ್ಲನು ಆದರೆ, ತನ್ನ ಇಷ್ಟದ ಪ್ರಕಾರ ಮತವನ್ನು ತಯಾರು ಮಾಡಲಾರನು. ಮತವನ್ನು ದೇವರೂ ತಯಾರು ಮಾಡಲಿಲ್ಲ. ಏಕೆಂದರೆ ದೇವರು ಯಾವ ಕಾರ್ಯವನ್ನೂ ಮಾಡದವನು. ದೇವರಿಗಿರುವ ಮುಖ್ಯವಾದ ಧರ್ಮ **"ದೇವರು ರೂಪ, ನಾಮ, ಕ್ರಿಯೆಗಳು ಇಲ್ಲದವನು"** ಎಂದು ಹೇಳುವುದೇ. ಅದರಲ್ಲಿ ದೇವರು ಕ್ರಿಯೆ ಇಲ್ಲದವನು ಆಗಿರುವುದರಿಂದ ದೇವರಿಗೆ ಕೆಲಸವಿಲ್ಲವೆಂದು, ದೇವರು ಕೆಲಸ ಮಾಡುವುದಿಲ್ಲವೆಂದು ಜ್ಞಾಪಕವಿಟ್ಟು ಕೊಳ್ಳಬೇಕು. ಆದ್ದರಿಂದ ದೇವರು ಮತಕ್ಕೆ ಸೃಷ್ಠಿಕರ್ತನಲ್ಲ. ಹಾಗೇ ದೇವರ ಧರ್ಮದ ಪ್ರಕಾರ ದೇವರಿಗೆ ರೂಪವೂ ಇಲ್ಲ, ಹೆಸರು ಇಲ್ಲ. ರೂಪ, ನಾಮ, ಕ್ರಿಯೆ ಮೂರು ಇಲ್ಲದವನು ದೇವರೆಂದು ಜ್ಞಾಪಕವಿಟ್ಟುಕೊಂಡು ದೇವರ ಧರ್ಮವನ್ನು ಅತಿಕ್ರಮಿಸದಂತೆ ಮಾತನಾಡಬೇಕು. ಒಂದು ಮತವನ್ನು ಸೃಷ್ಠಿಸಿರುವುದು ಮೂರು ಆತ್ಮಗಳಲ್ಲಿ ಅತ್ತ ಜೀವಾತ್ಮ ಅಲ್ಲ, ಇತ್ತ ಪರಮಾತ್ಮ ಅಲ್ಲ. ಹಾಗಿರುವಾಗ ಮತವನ್ನು ಯಾರು ಸೃಷ್ಠಿಸಿದ್ದಾರೆನ್ನುವ ಪ್ರಶ್ನೆಗೆ ಸುಲಭವಾಗಿ ಚಡಪಡಿಸದೆ ಆತ್ಮಯೆಂದು ಉತ್ತರವನ್ನು ಹೇಳಬಹುದು. ಆತ್ಮ ಮತವನ್ನು ಸೃಷ್ಠಿಸಿರುವಾಗ, ದೇವರು ಸಾಕ್ಷಿಯಾಗಿ ನೋಡುತ್ತಾ ಇರುವಾಗ, ಜೀವಾತ್ಮ ತನ್ನ ಶ್ರದ್ಧೆ ಪ್ರಕಾರ ಅಥವಾ ತನ್ನ ಇಷ್ಟದ ಪ್ರಕಾರ ಮತದಲ್ಲಿನ ಜ್ಞಾನವನ್ನು ತಿಳಿಯಬಹುದು ಇಲ್ಲವೆ ತಿಳಿಯದೆ ಇರಬಹುದು. ಅದೆಲ್ಲವೂ ಮನುಷ್ಯ ಶ್ರದ್ಧೆಯನ್ನನುಸರಿಸಿ ಇರುತ್ತದೆ. ಜ್ಞಾನದ ಮೇಲೆ ಶ್ರದ್ಧೆ ಇದ್ದರೆ ಜ್ಞಾನವನ್ನು ಗ್ರಹಿಸಬಲ್ಲನು. ಶ್ರದ್ಧೆ ಇಲ್ಲದೆ ಹೋದರೆ ಜ್ಞಾನವನ್ನು ಗ್ರಹಿಸಲಾರನು.

ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ ಮತವನ್ನು ಮನುಷ್ಯ ತಯಾರು ಮಾಡಿದ್ದಾನೆಂದು ಮೊದಲು ನೀವು ಹೇಳಿದ್ದೀರ. ನಂತರ ಮನುಷ್ಯ ತಯಾರು ಮಾಡಲಿಲ್ಲ. ಮನುಷ್ಯನಲ್ಲಿದ್ದು ಮನುಷ್ಯನನ್ನು ಆಡಿಸಿ ಆತ್ಮ ತಯಾರು ಮಾಡಿದೆಯೆಂದು ಹೇಳುತ್ತಿದ್ದೀರ. ಮನುಷ್ಯ ತಯಾರು ಮಾಡಲಿಲ್ಲವೆಂದು ಮೊದಲೇ ಹೇಳಬಹುದಲ್ಲವೆ! ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಮೂರು ಆತ್ಮಗಳ ವಿವರವನ್ನು ಹೇಳುವುದಕ್ಕಿಂತ ಮೊದಲು ಮತವನ್ನು ಮನುಷ್ಯನೇ ತಯಾರು ಮಾಡಿದ್ದಾನೆ. ದೇವರು ತಯಾರುಮಾಡಲಿಲ್ಲವೆಂದು ಹೇಳಿದ್ದೇನೆ. ಅಲ್ಲಿಯವರೆಗು ಮನುಷ್ಯನಿಗೆ ಆತ್ಮ ವಿಷಯವೇ ತಿಳಿದಿಲ್ಲ. ಆತ್ಮ ಎಲ್ಲರನ್ನೂ ನಡೆಸುತ್ತಿದೆಯೆನ್ನುವ ವಿಷಯ ತಿಳಿಯದಿರುವಾಗ, ನಾನು ನಿಜವನ್ನು ಹೇಳಿದರೂ ಮನುಷ್ಯ ನಂಬುವ ಸ್ಥಿತಿಯಲ್ಲಿ ಇರುವುದಿಲ್ಲ. ಪ್ರತಿ ಕೆಲಸವನ್ನು ನಾನೇ ಮಾಡುತ್ತಿದ್ದೇನೆಂದು ಹೇಳುವ ಮನುಷ್ಯನಿಗೆ ಬೇರೆ ಯಾರೋ ಮಾಡಿದ್ದಾನೆ, ನೀನು ಮಾಡಲಿಲ್ಲ ಎಂದರೆ ಕೇಳುತ್ತಾನಾ? ಉದಾಹರಣೆಗೆ ಈಗ ನೀನು ಒಂದು ಆಪಿಲ್ (ಸೇಬು) ಹಣ್ಣನ್ನು ತಿಂದಿದ್ದೀಯ ಎಂದುಕೊಳ್ಳೋಣ. ನಾನು ಬಂದು ನೀನು ಸೇಬು ತಿನ್ನಲಿಲ್ಲವೆಂದರೆ ಒಪ್ಪಿ ಕೊಳ್ಳುತ್ತೀಯ? ಒಪ್ಪಿಕೊಳ್ಳುವುದಿಲ್ಲ. ಏಕೆಂದರೇ ಸೇಬು ಹಣ್ಣನ್ನು ಕೈಯಿಂದ ತೆಗೆದುಕೊಂಡು, ಬಾಯಿಂದ ತಿಂದಿದ್ದೇನೆಂದು ನಿನಗೆ ಗೊತ್ತು. ಆದ್ದರಿಂದ ನಾನು ಸೇಬು ಹಣ್ಣನ್ನು ತಿಂದಿದ್ದೇನೆ ನನ್ನ ಮಾತು ನೂರಕ್ಕೆ ನೂರು ಪಾಲು ಸತ್ಯ ಎನ್ನುತ್ತೀಯ. ಮಧ್ಯದಲ್ಲಿ ನೀನು ತಿಂದಿಲ್ಲ ಎಂದ ನಾನು, ನಿನ್ನ ಮುಂದೆ ಬುದ್ಧಿಕಡಿಮೆಯವನಾಗಿ ಕಾಣಿಸುತ್ತೇನೆ. ಕೊನೆಗೆ ನೀನು ತಿಂದಿಲ್ಲ ಎಂದ ನನ್ನ ಮಾತು ವಾಸ್ತವವೇ. ತಿಂದಿದ್ದೇನೆ ಎಂದ ನಿನ್ನ ಮಾತು ಅವಾಸ್ತವವೇ. ನಿನ್ನ ಮಾತು ನಿನಗೆ ಅಸತ್ಯವೆಂದು ತಿಳಿಯುವುದಕ್ಕೆ ನಿನ್ನ ಶರೀರದಲ್ಲಿ ನಿನ್ನ ಪಾತ್ರ ಎಷ್ಟು ಎಂದು, ನಿನ್ನ ಆತ್ಮ ಪಾತ್ರ ಎಷ್ಟು ಎಂದು ತಿಳಿಯಬೇಕಾಗಿದೆ. ಆತ್ಮ ಪಾತ್ರ ತಿಳಿದಾಗ ನೀವು ನಿಜವಾಗಿ ತಿಂದಿಲ್ಲವೆಂದು ಅರ್ಥವಾಗಬಲ್ಲದು. ನಡೆಯುತ್ತಿರುವ ಕೆಲಸ ಸೇಬು ತಿನ್ನುವುದು, ಒಳಗೆ ತಲೆಯಲ್ಲಿರುವ ನಿನಗೆ ತಿಳಿಯುತ್ತಿದೆಯಾಗಲೀ ವಾಸ್ತವವಾಗಿ ನೀನು ತಿಂದಿಲ್ಲ. ಶರೀರವೆಲ್ಲಾ ಇದ್ದು

ಬಾಯಲ್ಲಿ, ಕೈಯಲ್ಲಿ ವ್ಯಾಪಿಸಿರುವ ಆತ್ಮವೇ ಎಲ್ಲಾ ಕೆಲಸಗಳು ಮಾಡುತ್ತಿದೆ. ಜೀವಾತ್ಮ ನಡೆಯುವುದನ್ನು ನೋಡುತ್ತಿದ್ದಾನೆ. ಅಷ್ಟು ಮಾತ್ರಕ್ಕೆ ನಾನೇ ತಿಂದಿದ್ದೇನೆಂದುಕೊಳ್ಳುವುದು ತಪ್ಪು.

ಇಂತಹ ತಪ್ಪುಗಳು ಪ್ರತಿನಿತ್ಯ ಎಲ್ಲವೇಳೆಗಳಲ್ಲೂ ಜೀವಾತ್ಮ ಮಾಡುತ್ತಲೇ ಇದ್ದಾನೆ. ಆದ್ದರಿಂದ ಮೊದಲು ಹೇಳಿದರೇ ಅರ್ಥವಾಗುವುದಿಲ್ಲವೆಂದು, ಮೊದಲಿಗೇ ಕೇಳದಂತೆ ಹೋಗಬಲ್ಲನೆಂದು ಮೊದಲು ಮನುಷ್ಯ ಅಂದು ಕೊಂಡಂತೇ ಮತವನ್ನು ಮನುಷ್ಯನೇ ತಯಾರು ಮಾಡಿದ್ದಾನೆಂದು ಹೇಳಿದ್ದೇವೆ. ನಂತರ ಸತ್ಯವನ್ನು ವಿವರಿಸಿ, ಆತ್ಮ ವಿಷಯವನ್ನು ತಿಳಿಸಿದ ನಂತರ ಮನುಷ್ಯ ಯಾವ ಕಾರ್ಯವನ್ನೂ ಮಾಡಲಿಲ್ಲವೆಂದು, ಎಲ್ಲಾ ಕಾರ್ಯಗಳನ್ನೂ ಆತ್ಮವೇ ಮಾಡುತ್ತಿದೆಯೆಂದು ಹೇಳುತ್ತಿದ್ದೇವೆ. ಭಗವದ್ಗೀತೆಯಲ್ಲಿ ಅರ್ಜುನನು ನಾನು ಸಾಯಿಸಿದರೆ ಪಾಪ ಬರುತ್ತದೆ ಎಂದು ಹೇಳಿದಾಗ, ನಾನು ಸಾಯಿಸಿದ್ದೇನೆಂದು ಅಂದುಕೊಂಡಾಗ ನಿನಗೆ ಪಾಪ ಬರುತ್ತದೆ. “ನೀನು ಸಾಯಿಸದೇ ಹೋದರೆ ನಿನಗೆ ಹೇಗೆ ಪಾಪ ಬರುತ್ತದೆಂದು” ಆತ್ಮ ಮಾಡುವ ವಿಧಾನವನ್ನು ಕೃಷ್ಣನು ವರ್ಣಿಸಿ ಹೇಳಿದ್ದಾನೆ. ಕೃಷ್ಣನು ಭಗವದ್ಗೀತೆಯಲ್ಲಿ ಆತ್ಮ ವಿಧಾನವನ್ನು ಹೇಳಿದ ನಂತರ ಅರ್ಜುನನು ಯುದ್ಧ ಮಾಡಿದ್ದಾನೆ. ಆಗ ಆ ಕೆಲಸ ಕರ್ಮ ಯೋಗವಾಗಿದೆ. ಅದಕ್ಕೂ ಮೊದಲು ಅದೇ ಯುದ್ಧವೇ ಕರ್ಮಪಾಶವಾಗಿ ಕಾಣಿಸಿತು. ಆದ್ದರಿಂದ ಅರ್ಜುನನು ಮೊದಲು ಬಾಧೆಪಟ್ಟಿದ್ದಾನೆ, ನಂತರ ನಿಮಿತ್ತಮಾತ್ರನಾಗಿ ಯುದ್ಧ ಮಾಡಿದ್ದಾನೆ. ಮೇಲ್ನೋಟಕ್ಕೆ ಅರ್ಜುನನು ಯುದ್ಧ ಮಾಡಿದರೂ, ಒಳಗೆ ಮಾಡಿಸಿರುವುದು ಅರ್ಜುನನಲ್ಲ ಆತ್ಮಯೆಂದು ಈದಿನ ನಮಗೆ ತಿಳಿದುಹೋಗಿದೆ. ಆದ್ದರಿಂದ ಪ್ರತಿ ಒಬ್ಬರೂ ದೈವ ಗ್ರಂಥಗಳಾದ ಮೂರು ಗ್ರಂಥಗಳಲ್ಲಿ, ಮುಖ್ಯವಾದ ಜ್ಞಾನವಾಗಿರುವ ಮೂರು ಆತ್ಮಗಳ ವಿವರವನ್ನು ತಿಳಿಯುವುದಾದರೇ, ಯಾರು ಏನು ಮಾಡುತ್ತಿರುವುದು ಸುಲಭವಾಗಿ ತಿಳಿದುಹೋಗಬಲ್ಲದು. ಅಲ್ಲಿಯವರೆಗು ಮಾಡದವರನ್ನು ಮಾಡಿದ್ದಾರೆಂದೂ, ಮಾಡಿದವರನ್ನು ಮಾಡಲಿಲ್ಲವೆಂದು ಅಂದುಕೊಳ್ಳುವುದು ನಡೆಯುತ್ತಿದೆ.

ಇಲ್ಲಿ ಮತ್ತೊಂದು ಪ್ರಶ್ನೆ ಕೆಲವರಿಗೆ ಬರಬಹುದು. ಅದೇನೆಂದರೆ! "ಎಲ್ಲಾ ಆತ್ಮವೇ ಮಾಡುವಾಗ, ಮನುಷ್ಯ ಏನೂ ಮಾಡದಿರುವಾಗ, ಮತವನ್ನು ಬದಲಾಯಿಸುತ್ತಿರುವ ಕೆಲಸವನ್ನು ಸಹ ಆತ್ಮವೇ ಮಾಡುತ್ತಿದೆ ಅಲ್ಲವೆ!" ಎಂದು ಕೇಳಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ನಾನು ಇದಕ್ಕೂ ಮೊದಲೇ ಹೇಳಿದ್ದೇನೆ. ಪ್ರಪಂಚ ವಿಷಯಗಳಲ್ಲಾಗಲೀ, ಮಾಯೆ ವಿಷಯಗಳಲ್ಲಾಗಲೀ, ಕರ್ಮ ವಿಷಯಗಳಲ್ಲಾಗಲೀ ಯಾರಿಗೂ ಸ್ವತಂತ್ರತೆ ಇಲ್ಲವೆಂದು ಮತ್ತೊಂದು ಬಾರಿ ನೆನಪು ಮಾಡುತ್ತಿದ್ದೇನೆ. ಒಂದು ಆತ್ಮ ವಿಷಯಗಳಲ್ಲಿ ಮಾತ್ರವೇ ಮನುಷ್ಯನಿಗೆ (ಜೀವಾತ್ಮನಿಗೆ) ಸ್ವತಂತ್ರವಿದೆಯೆಂದು ಹೇಳಿದ್ದೇನೆ. ಆತ್ಮ ವಿಷಯವಾಗಿ ಅಥವಾ ದೇವರ ವಿಷಯವಾಗಿ, ದೇವರನ್ನು ತಿಳಿಯುವುದಕ್ಕೋಸ್ಕರ ಅಥವಾ ದೇವರ ಜ್ಞಾನವನ್ನು ತಿಳಿಯುವುದಕ್ಕೋಸ್ಕರ, ಮನುಷ್ಯ ಸ್ವತಂತ್ರವಾಗಿ ಮತವನ್ನು ಬದಲಾಗುತ್ತಿದ್ದಾನೆ. ಹಾಗೆ ಬದಲಾಗುವುದರಲ್ಲಿ ಮನುಷ್ಯನಿಗೆ ಸ್ವತಂತ್ರತೆ ಇದೆ. ಆದರೇ ದೇವರಿಗೋಸ್ಕರ ಮತ ಬದಲಾಗುವುದು ಇಲ್ಲಿ ಒಳ್ಳೆಯ ಕೆಲಸವಾಗಿಯೇ ಕಾಣಿಸಿದರೂ, ಆ ಕಾರ್ಯ ಸಹ ದೈವದ್ರೋಹದ ಕೆಳಗೆ ಜಮಕಟ್ಟಲಾಗುತ್ತದೆ. ಅಷ್ಟೇ ಅಲ್ಲದೆ ಮತ್ತೆ ಕೆಲವರು ದೇವರಿಗೋಸ್ಕರವಾಗಲೀ, ದೇವರ ಜ್ಞಾನಕ್ಕೋಸ್ಕರವಾಗಲೀ ಅಲ್ಲದೆ ಕೇವಲ ಪ್ರಪಂಚ ಸುಖಗಳಿಗೋಸ್ಕರ, ಪ್ರಪಂಚ ಪ್ರಲೋಭಗಳಿಗೋಸ್ಕರ ಮತವನ್ನು ಬದಲಾಗುವವರು ಸಹ ಇದ್ದಾರೆ. ಅಂಥವರು ಪ್ರಪಂಚ ಕಾರ್ಯಗಳಿಗೇ ಮತವನ್ನು ಬದಲಾಗುತ್ತಿದ್ದಾರೆ ಆದ್ದರಿಂದ, ಅವರು ಬದಲಾದಂತಲ್ಲ, ಆ ಕೆಲಸದಲ್ಲಿ ಅವರಿಗೆ ಸ್ವತಂತ್ರತೆ ಇಲ್ಲ. ಆದ್ದರಿಂದ ಅವರನ್ನು ಆತ್ಮವೇ ಬದಲಾಯಿಸಿದೆ ಎಂದು ಹೇಳಬಹುದು. ಆದರೂ ಆ ವಿಷಯ ಅವನಿಗೆ ತಿಳಿದಿಲ್ಲ ಆದ್ದರಿಂದ, ತಾನೇ ಸ್ವತಃವಾಗಿ ಮತವನ್ನು ಬದಲಾಗಿದ್ದೇನೆಂದು ಅವನು ಅಂದುಕೊಳ್ಳುವುದು ನಡೆಯುತ್ತಿದೆ. ಆಗ ಅವನ ಭಾವನೆ ಪ್ರಕಾರ ಆ ಕೆಲಸವನ್ನು ಅವನು ಮಾಡದಿದ್ದರೂ, ಆ ಕೆಲಸದಲ್ಲಿನ ಪಾಪ ಅವನಿಗೇ ಸೇರುತ್ತಿದೆ. ಅಂತಹವರಿಗೆ ಮತ ಮಾರ್ಪಾಟು ಮಹಾ ಪಾಪವಾಗಿ ಲೆಕ್ಕಿಸಲ್ಪಟ್ಟು ಅವನನ್ನು ಸೇರುತ್ತಿದೆ.

ಇಲ್ಲಿ ಕೆಲವರು ಮತ್ತೊಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಒಬ್ಬನು ದೇವರಿಗೋಸ್ಕರವಾಗಲೀ, ದೇವರ ಜ್ಞಾನಕ್ಕೋಸ್ಕರವಾಗಲೀ ಮತ ಬದಲಾಯಿಸಿದರೆ ಅದು ಒಳ್ಳೆಯ ಕೆಲಸವಾದರೂ, ಅವನ ಇಷ್ಟದಿಂದ ಅವನು ಬದಲಾದರೂ, ಆ ಕಾರ್ಯವನ್ನು ದೈವದ್ರೋಹ ಎಂದಿದ್ದೀರ. ನಂತರ ಅವನ ಇಷ್ಟದಿಂದ ಸಂಬಂಧವಿಲ್ಲದಂತೆ ಕರ್ಮ ಪ್ರಕಾರ ಆತ್ಮವೇ ಮನುಷ್ಯನನ್ನು ಪ್ರಲೋಭಪಿಟ್ಟು, ಯಾವುದೋ ಒಂದು ಆಸೆಯನ್ನು ತೋರಿಸಿ ಮನುಷ್ಯನನ್ನು ಮತ ಬದಲಾಗುವಹಾಗೆ ಮಾಡುತ್ತಿದೆ. ಹಾಗೆ ಬದಲಾಗುವುದು ದೈವ ಸಂಬಂಧವಾಗದಿದ್ದರೂ, ಅವನಿಗೂ ಸಹ ಪಾಪ ಬರುತ್ತಿದೆಯೆಂದು ಹೇಳಿದ್ದಾರೆ. ದೇವರಿಗೋಸ್ಕರ ಬದಲಾದರೆ ದೈವದ್ರೋಹ, ಆಸೆಗಳಿಗೋಸ್ಕರ ಬದಲಾದರೆ ಮಹಾಪಾಪ ಎಂದು ಹೇಳಿದ್ದಾರೆ. ಈ ಎರಡರಲ್ಲಿ ದೈವದ್ರೋಹ ದೊಡ್ಡದಾ ಅಥವಾ ಮಹಾಪಾಪ ದೊಡ್ಡದಾ? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ. ದೇವರಿಗೋಸ್ಕರ ಮತವನ್ನು ಬದಲಾದರೂ ಅಥವಾ ಪ್ರಪಂಚ ಆಸೆಗಳಿಗೋಸ್ಕರ, ಲಾಭಗಳಿಗೋಸ್ಕರ ಮತವನ್ನು ಬದಲಾದರೂ ಎರಡು ಕಡೆ ಮನುಷ್ಯನಿಗೆ ಕೆಟ್ಟದೇ ಆಗಲಿ, ಒಳ್ಳೆಯದು ಮಾತ್ರ ಇಲ್ಲ. ಅಜ್ಞಾನ ದಿಶೆಯಲ್ಲಿ ಮನುಷ್ಯನಿದ್ದು ಕೇವಲ ಪ್ರಪಂಚ ಆಸೆಗಳಿಗೆ, ಲಾಭಗಳಿಗೆ ಮತವನ್ನು ಬದಲಾಯಿಸುವುದರಿಂದ ಮಹಾಪಾಪವೇ ಬರುತ್ತದೆ. ಆದರೇ ಪಾಪಕ್ಕಿಂತ ದೈವದ್ರೋಹವೇ ಬಹಳ ದೊಡ್ಡದು. ಪಾಪ ಪ್ರಪಂಚ ಕಷ್ಟಗಳಿಂದ ಮುಗಿದುಹೋಗುತ್ತದೆ. ದೈವದ್ರೋಹ ಪ್ರಪಂಚ ವಿಷಯಗಳಿಂದ ಮುಗಿಯದೆ, ದೇವರ ವಿಷಯಗಳಲ್ಲಿ ಕೆಲಸಮಾಡಿ ದೇವರಿಗೆ ಇನ್ನೂ ಸ್ವಲ್ಪ ದೂರವಾಗುವಂತೆ ಮಾಡುತ್ತದೆ. ಆದ್ದರಿಂದ ದೇವರಿಗೆ ಸ್ವಲ್ಪ ದೂರವಾದರೂ ಅದು ಪಾಪ ಅನುಭವಿಸುವುದಕ್ಕಿಂತ ದೊಡ್ಡದೆಂದೇ ಹೇಳಬಹುದು.

ಪ್ರಪಂಚ ಆಸೆಗಳಿಗೋಸ್ಕರ ತಾನು ಮಾಡದ ಕೆಲಸವನ್ನು, ಆತ್ಮ ಮಾಡಿದ ಕೆಲಸವನ್ನು ತಾನು ಮಾಡಿದ್ದೇನೆಂದು ಒಪ್ಪಿಕೊಳ್ಳುವುದರಲ್ಲಿ, ಆ ಕೆಲಸವನ್ನು ಅನುಸರಿಸಿ ಫಲಿತ ಜೀವಾತ್ಮಕ್ಕೆ ಸೇರುತ್ತಿರುತ್ತದೆ. ಪ್ರಪಂಚ ಲಾಭಗಳಿಗೋಸ್ಕರ

ಇರುವ ಮತವನ್ನು ಬಿಟ್ಟು ಹೋಗುವುದು ಕೆಟ್ಟ ಕೆಲಸವಾಗಿ ಲೆಕ್ಕಿಸಲ್ಪಡುತ್ತಿರುವುದರಿಂದ, ಮತ ಬದಲಾದವನಿಗೆ ಪಾಪ ಬರುತ್ತದೆ. ಹಾಗೇ ಜ್ಞಾನದ ಮೇಲೆ ಶ್ರದ್ಧೆ ಇದ್ದು ದೇವರಿಗೋಸ್ಕರ ಮತ ಬದಲಾದರೂ, ಆತನಿಗೆ ಪಾಪಕ್ಕಿಂತ ಕೆಟ್ಟದಾದ ದೈವದ್ರೋಹ ಅಂಟಿಕೊಳ್ಳುತ್ತಿದೆ. ಈ ಮಾತುಗಳು ಕೇಳಿದ ನಂತರ ಇಲ್ಲಿ ಕೆಲವರಿಗೆ ಮತ್ತೊಂದು ಪ್ರಶ್ನೆ ಬಂದು ಹೀಗೆ ಕೇಳಬಹುದು. ಮತ ಮಾರ್ಪಾಟು ಪಾಪ ಸಂಪಾದಿಸಿಡುವಷ್ಟು ಕೆಟ್ಟ ಕಾರ್ಯ ಹೇಗಾಗಿದೆ. ಹಾಗೇ ಜ್ಞಾನಕ್ಕೋಸ್ಕರ ಮತಮಾರ್ಪಾಟು ಮಾಡಿದರೂ ದೈವದ್ರೋಹ ಉಂಟಾಗುವಷ್ಟು ಕೆಟ್ಟ ಕೆಲಸ ಹೇಗೆ ಆಗಿದೆ? ಈ ಪ್ರಶ್ನೆಗಳು ಸಹಜವಾಗಿ ಯಾರಿಗಾದರೂ ಬರುವವೇ. ಈ ಪ್ರಶ್ನೆಗಳಿಗೆ ನಮ್ಮ ಉತ್ತರ ಈ ವಿಧವಾಗಿದೆ ನೋಡಿರಿ. ದೇವರಹಾಗೆ ಆತ್ಮ ಕೆಲಸ ಮಾಡಿ ಮುಖ್ಯವಾಗಿ ಮೂರು ಗ್ರಂಥಗಳ ಆಧಾರದಿಂದ ಮೂರು ಮತಗಳನ್ನು ತಯಾರು ಮಾಡಿ ಇಟ್ಟಿದೆ. ವಾಸ್ತವಕ್ಕೆ ದೇವರು ಯಾವ ಮತವನ್ನೂ ತಯಾರು ಮಾಡಲಿಲ್ಲ. ದೇವರು ಮೂರು ಗ್ರಂಥಗಳ ಜ್ಞಾನವನ್ನು ಎರಡು ಬಾರಿ ಭಗವಂತನಿಂದ, ಒಂದು ಬಾರಿ ಗ್ರಹದಿಂದ ತಿಳಿಸಿದ್ದಾನೆ. ಭಗವಂತನಾದ ಮನುಷ್ಯನಿಂದ ಎರಡು ಬಾರಿ ತಿಳಿಸಿದ ಜ್ಞಾನ ಪ್ರಥಮ ದೈವ ಗ್ರಂಥವಾಗಿ ಒಂದು, ದ್ವಿತೀಯ ದೈವ ಗ್ರಂಥವಾಗಿ ಮತ್ತೊಂದು ನಮ್ಮ ಮುಂದೆ ಇವೆ. ನಂತರ ಖಗೋಳದಲ್ಲಿರುವ ಸಂಪೂರ್ಣ ಜ್ಞಾನಿಯಾದ ಒಂದು ಗ್ರಹದಿಂದ ತಿಳಿಸಿದ ಜ್ಞಾನ ಅಂತಿಮ ದೈವ ಗ್ರಂಥವಾಗಿ ಇದೆ. ಮೂರು ಗ್ರಂಥಗಳಲ್ಲಿಯೂ ದೇವರ ಜ್ಞಾನವೇ ಇದೆ. ಮೊದಲು ಹೇಳಿದ್ದರೂ ನಂತರ ಗ್ರಂಥರೂಪವಾಗಿದ್ದರೂ ಗ್ರಂಥಗಳಲ್ಲಿ ಸ್ವಲ್ಪ ಮನುಷ್ಯರ ಕಲ್ಪಿತ ಕಾಲುಷ್ಯ ಸೇರಿರಬಹುದು. ಆದರೇ ಅಂತಹ ಕಾಲುಷ್ಯವನ್ನು ನಾವು ಸುಲಭವಾಗಿ ಗುರುತಿಸಬಹುದು, ದೇವರ ಜ್ಞಾನವನ್ನು ತಿಳಿಯಬಹುದು. ಕಾಲುಷ್ಯ ಸ್ವಲ್ಪವಿದ್ದರೂ ಅದು ಲೆಕ್ಕ ಇಲ್ಲದಿರುವುದು, ಅದರಿಂದ ಸಮಸ್ಯೆ ಇಲ್ಲ.

ಪ್ರಥಮ ದೈವ ಗ್ರಂಥವಾದ ಭಗವದ್ಗೀತೆಯಲ್ಲಿ ಎಷ್ಟೋ ಜ್ಞಾನವಿದ್ದರೂ, ಅದರಲ್ಲಿ ಮುಖ್ಯವಾಗಿ ಮೂರು ಆತ್ಮಗಳನ್ನು ಕುರಿತು ಹೇಳಿರುವುದೇ ಇದೆ.

ಜ್ಞಾನ ಎಲ್ಲರೂ ತಿಳಿದುಕೊಳ್ಳಬೇಕೆಂದು ಮೂರು ಬಾರಿ, ಮೂರು ಜಾಗಗಳಲ್ಲಿ ದೇವರು ಹೇಳಿಸಿದ ಜ್ಞಾನವನ್ನು, ಆತ್ಮ ಮನುಷ್ಯರಿಂದ ಮೂರು ಗ್ರಂಥಗಳಾಗಿ ಮಾಡಿಸಿದೆ. ದೇವರು ತನ್ನ ಜ್ಞಾನವನ್ನು ನೇರವಾಗಿ ಯಾರೊಂದಿಗೂ ಪ್ರತ್ಯಕ್ಷವಾಗಿ ಹೇಳಲಿಲ್ಲ. ಸೃಷ್ಠಿ ಆದಿಯಲ್ಲಿ ಆಕಾಶವಾಣಿಯಿಂದ ಜ್ಞಾನವನ್ನು ಹೇಳಿಸಿದ್ದಾನೆ. ನಂತರ ಅದೇ ಜ್ಞಾನವನ್ನೇ ತನ್ನ ದೂತನಿಂದ (ಭಗವಂತನಿಂದ) ಹೇಳಿಸಿದ್ದಾನೆ. ಮೂರನೆ ವಿಧಾನವಾದ ಗ್ರಹದಿಂದ ಹೇಳಿಸಿದ್ದಾನೆ. ಇದೇ ವಿಷಯವೇ ಅಂತಿಮ ದೈವ ಗ್ರಂಥದಲ್ಲಿ 42ನೇ ಸೂರಾ, 51ನೇ ಆಯತ್‌ನಲ್ಲಿ ಹೀಗೆ ಇದೆ **"ದೇವರು ನೇರವಾಗಿ ಯಾರೊಂದಿಗೂ ಮಾತನಾಡುವುದಿಲ್ಲ. ಆದರೇ ಆತನು ತನ್ನ ಜ್ಞಾನವನ್ನು ಒಂದು ವಹೀ ಮೂಲಕ (ವಾಣಿಯಿಂದ) ಎರಡು ತೆರೆ ಹಿಂಬದಿಯಿಂದ, ಮೂರು ತನ್ನ ದೂತನಿಂದ ತಿಳಿಸುವುದು ನಡೆದಿದೆ. ನಿಶ್ಚಯವಾಗಿ ಆತನು ಮಹೋನ್ನತನು, ವಿವೇಕವಂತನು."** ಎಂದು ಇದೆ. ದೇವರು ರೂಪ, ನಾಮ, ಕ್ರಿಯಾ ರಹಿತನಾಗಿರುವುದರಿಂದ, ಆತನು ಯಾವ ಕೆಲಸ ಮಾಡುವುದಿಲ್ಲ. ಆದ್ದರಿಂದ ಆತನ ಪರವಾಗಿ ಉಳಿದವರು ಪ್ರಜೆಗಳಿಗೆ ದೇವರ ಜ್ಞಾನವನ್ನು ತಿಳಿಸಿದ್ದಾರೆ. ಮೊದಲು ಆಕಾಶ ತನ್ನ ವಾಣಿಯಿಂದ (ಶಬ್ದದಿಂದ) ದೇವರ ಜ್ಞಾನವನ್ನು ಸೂರ್ಯನಿಗೆ ತಿಳಿಸಿದೆ. ಅದೇ ಜ್ಞಾನವನ್ನೇ ದೇವರ ದೂತನಾದ ಭಗವಂತನು ಪ್ರಜೆಗಳಿಗೆ ತಿಳಿಸುವುದು ನಡೆದಿದೆ. ವಾಣಿ, ದೂತನಿಂದ ಬಂದಿರುವ ಜ್ಞಾನವನ್ನು ಗ್ರಹ ಸಹ ಪ್ರಜೆಗಳಿಗೆ ತಿಳಿಸುವುದು ನಡೆದಿದೆ. ಈ ವಿಧವಾಗಿ ದೇವರ ಜ್ಞಾನ ಮೂರು ವಿಧಗಳಾಗಿ ಭೂಮಿ ಮೇಲೆಗೆ ಬಂದಿದೆ. ಆದರೇ ದೇವರು ಎಲ್ಲೂ ಸ್ವತಃವಾಗಿ ತನ್ನ ಜ್ಞಾನವನ್ನು ಹೇಳಲಿಲ್ಲ. ಆದರೂ ಮಾತುಗಳ ಸಂದರ್ಭಗಳಲ್ಲಿ ದೇವರ ಜ್ಞಾನವನ್ನು ದೇವರು ಹೇಳಿದ ಜ್ಞಾನ ಎಂದು ಹೇಳುತ್ತಿರುತ್ತೇವೆ. ವಾಸ್ತವವಾಗಿ ದೇವರು ಎಲ್ಲೂ ಜ್ಞಾನವನ್ನು ಹೇಳಲಿಲ್ಲ. ಏಕೆಂದರೆ! ಆತನು ರೂಪ, ನಾಮ, ಕ್ರಿಯಾರಹಿತನೆಂದು ಮರೆಯಬಾರದು.

ದೇವರ ಜ್ಞಾನ ಮೂರು ವಿಧಗಳಲ್ಲಿ ಮನುಷ್ಯರ ಹತ್ತಿರಕ್ಕೆ ಸೇರಿಹೋಗಿದೆ. ಹಾಗೆ ಸೇರಿದ ಜ್ಞಾನವೇ ಮೂರು ಗ್ರಂಥಗಳಾಗಿ ತಯಾರಾಗಿದೆ. ಮೂರು

ಗ್ರಂಥಗಳಲ್ಲಿಯೂ ಒಂದೇ ದೇವರ ಜ್ಞಾನ ಹೊರತು ಬೇರೆ ಯಾವುದೂ ಇರುವುದಕ್ಕೆ ಅವಕಾಶವಿಲ್ಲ. ಜಾತಿ ಒಂದೇ ಆದರೂ, ತಂದೆ ಒಬ್ಬನೇ ಆದರೂ ಕುಮಾರರು ಮೂವರು ಬೇರೆ ಬೇರೆಯಾಗಿ ಮುಂದೆ ಹಿಂದೆ ಹುಟ್ಟಿದಹಾಗೆ ಮೂರು ಗ್ರಂಥಗಳಲ್ಲಿ ದೇವರೂ, ಜ್ಞಾನವೂ ಒಂದೇ ಆದರೂ, ಮೂರು ಗ್ರಂಥಗಳು ಮುಂದೆ ಹಿಂದೆ ಹುಟ್ಟಿವೆ. ಮೊದಲು ಹುಟ್ಟಿದ ಪ್ರಥಮ ದೈವ ಗ್ರಂಥ ಭಗವದ್ಗೀತೆಯನ್ನು ಅನುಸರಿಸಿ ಹುಟ್ಟಿದ ಉಳಿದ ಎರಡು ಗ್ರಂಥಗಳು ಪ್ರಥಮ ಗ್ರಂಥವನ್ನು ಧೃಢೀಕರಿಸುವುದಕ್ಕೇ ಎಂದು, ಅದರಲ್ಲಿನ ಮೂರು ಅತ್ಮಗಳ ವಿವರಗಳಿಗೆ ಸಾಕ್ಷಿ ಕೊಡುವುದಕ್ಕೇ ಎಂದು ತಿಳಿದುಕೊಂಡಿದ್ದೇವೆ. ಆ ವಿಷಯವನ್ನು ಅಂತಿಮ ದೈವ ಗ್ರಂಥದಲ್ಲಿ ಎರಡನೆ ಸೂರಾದಲ್ಲಿ 89ನೇ ವಾಕ್ಯ ಹೇಳುತ್ತಿದೆ. ಇದೆಲ್ಲವೂ ಗಮನಿಸಿದ ನಂತರ ಮೂರು ಗ್ರಂಥಗಳಲ್ಲಿ ಇರುವುದು ಒಂದೇ ದೇವರ ಜ್ಞಾನವೆಂದೂ, ಆ ಗ್ರಂಥಗಳನ್ನು ಅನುಸರಿಸಿ ತಯಾರಾದ ಮತಗಳಲ್ಲಿ ಆ ಗ್ರಂಥಗಳಲ್ಲಿನ ಜ್ಞಾನವೇ ಇದೆಯೆಂದು ತಿಳಿದುಹೋಗಿದೆ. ಗ್ರಂಥಗಳು ದೇವರಿಂದ ಬಂದಿರುವವು, ಆದರೇ ಆ ಗ್ರಂಥಗಳ ಮತಗಳು ಆತ್ಮನಿಂದ ಬಂದಿರುವವು. ಮತವನ್ನು ದೊಡ್ಡದಾಗಿ ಇಟ್ಟುಕೊಳ್ಳುವವರು ಯಾರ ಮತವನ್ನು ಅವರು ದೊಡ್ಡದಾಗಿ ಹೇಳಿಕೊಂಡರೂ, ಆ ಮತ ಗ್ರಂಥದಲ್ಲಿ ಅಸಲಾದ ದೇವರ ಜ್ಞಾನವೇ ಇದೆ.

ಭೂಮಿ ಮೇಲೆ ಹುಟ್ಟುವ ಮನುಷ್ಯ ಎಲ್ಲಿ ಹುಟ್ಟಿದರೂ, ಯಾವುದೋ ಒಂದು ಮತದಲ್ಲಿ ಹುಟ್ಟುತ್ತಿದ್ದಾನೆ. ಹುಟ್ಟಿದಾಗ ತಿಳಿಯದೆ ಹೋದರೂ ಬೆಳೆದ ನಂತರ ತಾನು ಹುಟ್ಟಿದ ಕುಟುಂಬವನ್ನನುಸರಿಸಿ, ಆ ಕುಟುಂಬ ಯಾವ ಮತದಲ್ಲಿ ಇರುತ್ತದೋ, ತನ್ನದು ಆ ಮತವೇ ಎಂದುಕೊಳ್ಳುವನು. ಇದೆಲ್ಲಾ ಒಂದು ನಿರ್ಣಯದ ಪ್ರಕಾರವೇ ನಡೆಯುತ್ತಿದೆ. ದೇವರಿಗೆ ತಿಳಿಯದಂತೆ ಏನೂ ನಡೆಯುವುದಿಲ್ಲ. ಶರೀರದಲ್ಲಿನ ಆತ್ಮ ಕೆಲವು ಸಮಯಗಳಲ್ಲಿ ಮನುಷ್ಯರ ಕಾರ್ಯಗಳು ಮಾಡಿ, ಮನುಷ್ಯರು ಮಾಡಿದಹಾಗೆ ಭ್ರಮಿಸುವಂತೆ ಮಾಡುತ್ತದೆ. ಹಾಗೇ ಕೆಲವು ಸಮಯಗಳಲ್ಲಿ ದೇವರ ಪಾತ್ರವನ್ನು ಪೋಷಿಸುತ್ತಾ, ದೇವರು

ಮಾಡಬೇಕಾಗಿರುವ ಕೆಲಸಗಳನ್ನು ಸಹ ತಾನೇ ಮಾಡುತ್ತಿರುತ್ತದೆ. ಒಬ್ಬ ಮನುಷ್ಯ ಎಲ್ಲಿ ಯಾವ ಮತದಲ್ಲಿ ಹುಟ್ಟಬೇಕಾಗಿರುವುದು ಆತ್ಮನಿಗೆ ಗೊತ್ತು. ಆದ್ದರಿಂದ ಅದೇ ದೇವರ ನಿರ್ಣಯ ಎನ್ನುವಂತೆ, ಆತ್ಮವೇ ಜೀವಿಯನ್ನು ಯಾವುದೋ ಒಂದು ಮತದಲ್ಲಿ ಹುಟ್ಟಿಸುತ್ತಿದೆ. ದೇವರು ನನ್ನನ್ನು ಈ ಮತದಲ್ಲಿ ಹುಟ್ಟಿಸಿದ್ದಾನೆಂದು ಆತ್ಮವೇ ಮನುಷ್ಯನಿಂದ ಹೇಳಿಸುತ್ತಿದೆ. ಇದನ್ನನುಸರಿಸಿ ಆತ್ಮ ದೇವರ ಹಾಗೆಯೂ ಮತ್ತು ಜೀವಿಯ ಹಾಗೆಯೂ ಎರಡು ವಿಧಗಳಲ್ಲಿ ಕೆಲಸ ಮಾಡುತ್ತಿದೆ. ಇತ್ತ ಜೀವಿಯಾಗಲೀ, ಅತ್ತ ದೇವರಾಗಲೀ ಇಬ್ಬರೂ ಕೆಲಸಮಾಡುವವರಲ್ಲ ಆದ್ದರಿಂದ ಆತ್ಮನೇ ಇಬ್ಬರ ಕೆಲಸವನ್ನು ಮಾಡಿ, ತಾನು ಏನೂ ಮಾಡದಹಾಗೆ ಇರುತ್ತಿದೆ. ಇದೆಲ್ಲವೂ ಶರೀರದಲ್ಲಿ ನಡೆಯುತ್ತಿರುವ ದೊಡ್ಡ ರಹಸ್ಯ!

ಒಬ್ಬ ಮನುಷ್ಯ ಒಂದು ಮತದಲ್ಲಿ ಹುಟ್ಟಿದ್ದಾನೆಂದರೆ ಅದು ದೇವರಿಗೆ ತಿಳಿಯದಂತೆ, ದೇವರ ಇಚ್ಛೆ ಇಲ್ಲದೆ ನಡೆದಿರುವುದಿಲ್ಲ. ಆ ವಿಷಯವೆಲ್ಲಾ ಆತ್ಮಕ್ಕೆ ತಿಳಿದಿದೆ. ಆತ್ಮ ದೇವರ ಇಷ್ಟ ಪ್ರಕಾರವೇ ಕೆಲಸ ಮಾಡಿ ಇಡುತ್ತಿದೆ. ಒಬ್ಬನು ಹುಟ್ಟಿನಿಂದಲೇ ಒಂದು ಮತದಲ್ಲಿ ಇದ್ದಾನೆಂದರೆ, ಅದೇ ಕೆಲಸವಾಗಿ ದೇವರು ಅವನನ್ನು ಆ ಮತದಲ್ಲಿ ಹುಟ್ಟಿಸಿದ್ದಾನೆಂದೇ ಅರ್ಥ. ದೇವರು ಹುಟ್ಟಿಸಿದ ಮತದಲ್ಲೇ ಮನುಷ್ಯನಿಗೆ ಬೇಕಾದ ಜ್ಞಾನವಿದೆ ಆದ್ದರಿಂದ, ಆ ಮತದಲ್ಲೇ ಅವನಿರುತ್ತಾ, ಆ ಮತ ವೊಂದರ ಗ್ರಂಥದಲ್ಲಿನ ದೈವ ಜ್ಞಾನವನ್ನು ತಿಳಿದುಕೊಂಡು ಕೊನೆಗೆ ಮೋಕ್ಷವನ್ನು ಹೊಂದಬಹುದು. ಆ ಉದ್ದೇಶದಿಂದಲೇ ದೇವರು ಒಂದು ಮತವನ್ನು ನಿರ್ಣಯಿಸಿ, ಆ ಮತದಲ್ಲಿ ಮನುಷ್ಯನನ್ನು ಹುಟ್ಟಿಸುತ್ತಿದ್ದಾನೆ. ಮನುಷ್ಯ ದೇವರು ನಿರ್ಣಯಿಸಿದ ಮತದಲ್ಲಿ ಹುಟ್ಟಿದ ನಂತರ ಮತದ ಮೇಲೆ ಅಲ್ಲದೆ, ಮತ ಗ್ರಂಥದ ಮೇಲೆ ದೃಷ್ಟಿಯನ್ನು ಇಟ್ಟು ಆ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯುವುದಾದರೇ, ಮನುಷ್ಯ ಸುಲಭವಾಗಿ ದೇವರನ್ನು ಸೇರಬಹುದು. ಆದರೇ ಮನುಷ್ಯ ತಾನು ಯಾವ ಮತದಲ್ಲಿ ಹುಟ್ಟುತ್ತಿದ್ದಾನೋ, ಆ ಮತದ ಮೇಲೆ ಧ್ಯಾಸವನ್ನು ಇಟ್ಟುಕೊಳ್ಳುತ್ತಿರುವುದರಿಂದ, ಆ ಮತವನ್ನೇ

ಪ್ರಚಾರ ಮಾಡುವುದರಲ್ಲಿ ಮುಳುಗಿಹೋಗುವುದರಿಂದ, ಮತ ಗ್ರಂಥವನ್ನು ನೋಡಲಾರದೆ ಹೋಗುತ್ತಿದ್ದಾನೆ. ದೇವರು ಕೊಟ್ಟಿರುವ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯಲಾರದೆ ಹೋಗುತ್ತಿದ್ದಾನೆ. ಆದ್ದರಿಂದ ಮನುಷ್ಯ ದೇವರನ್ನಾಗಲೀ, ದೇವರ ಜ್ಞಾನವನ್ನಾಗಲೀ ತಿಳಿಯದಂತೆ ಹೋಗುತ್ತಿದ್ದಾನೆ.

ಉದಾಹರಣೆಗೆ ಇಸ್ಲಾಮ್ ಕುಟುಂಬದಲ್ಲಿ ಒಬ್ಬನು ಹುಟ್ಟಿದ್ದಾನೆಂದುಕೊಳ್ಳಿ. ಆಗ ಹುಟ್ಟುವುದರಲ್ಲಿ ಎಲ್ಲ ಮನುಷ್ಯರು ಹುಟ್ಟಿದಂತೆ ಹುಟ್ಟಿರುತ್ತಾನೆ. ಆಗ ಶಿಶುದಶೆಯಲ್ಲಿ ಆತನಿಗೆ ಎಂತಹ ಮತ ಪ್ರಸ್ತಾಪ ಇರುವುದಿಲ್ಲ. ಸ್ವಲ್ಪ ಕಾಲ ಬೆಳೆದು ಬುದ್ಧಿ ಬರುತ್ತಿದ್ದಂತೆ ಕುಟುಂಬದಲ್ಲಿನ ಹಿರಿಯರ ಆಚಾರ ವ್ಯವಹಾರಗಳನ್ನನುಸರಿಸಿ, ಆರಾಧನೆಗಳನ್ನನುಸರಿಸಿ ನನ್ನದು ಇಂತಹ ಮತ ಎಂದು ಮನುಷ್ಯ ತಿಳಿಯುತ್ತಿದ್ದಾನೆ. ಆ ವಿಧವಾಗಿ ನಾನು ಇಸ್ಲಾಮ್ ಮತದಲ್ಲಿ ಹುಟ್ಟಿದ್ದೇನೆಂದು ತಿಳಿದುಕೊಂಡ ವ್ಯಕ್ತಿ, ಮೂರು ವಿಧಗಳಾಗಿ ಪ್ರವರ್ತಿಸುವುದಕ್ಕೆ ಅವಕಾಶವಿದೆ. ಒಂದು ತನ್ನ ಮತದಮೇಲಾಗಲೀ, ತನ್ನ ಮತ ಗ್ರಂಥದ ಮೇಲಾಗಲೀ ಧ್ಯಾಸ ಇಲ್ಲದಂತೆ ಸರ್ವಸಾಧಾರಣವಾಗಿ ಎಲ್ಲರೊಂದಿಗೆ ಸಮಾನವಾಗಿ ಜೀವನವನ್ನು ಸಾಗಿಸುವುದು. ಎರಡನೆಯದು ಮತದ ಮೇಲೆ ಧ್ಯಾಸವಿದ್ದು ತನ್ನ ಮತ ಇತರ ಮತಗಳಿಗಿಂತ ದೊಡ್ಡದು ಆಗಬೇಕೆನ್ನುವ ಉದ್ದೇಶದಿಂದ, ಮತಕ್ಕೆ ಸೇವೆ ಮಾಡುತ್ತಾ, ಮತ ಪ್ರಚಾರವನ್ನು ಸಾಗಿಸುತ್ತಾ ಬದುಕುವುದು. ಇನ್ನು ಮೂರನೆ ವಿಧಾನವನ್ನು ನೋಡಿದರೆ ಮನುಷ್ಯ ತನ್ನ ಮತ ಗ್ರಂಥದ ಮೇಲೆ ಇಷ್ಟತೆನ್ನು ಬೆಳೆಸಿಕೊಂಡು, ಗ್ರಂಥದಲ್ಲಿನ ಜ್ಞಾನ ತಿಳಿದು, ಮತದ ಮೇಲೆ ಧ್ಯಾಸವಾಗಲೀ, ಮತ ಪ್ರಚಾರದ ಮೇಲೆ ಧ್ಯಾಸವಾಗಲೀ ಇಲ್ಲದಂತೆ ಇರುವುದು ನಡೆಯುತ್ತದೆ. ಈ ವಿಧವಾಗಿ ಇಸ್ಲಾಮ್ ಮತವನ್ನು ನೋಡಿದರೆ, ಬಹಳ ಜನ ಇಸ್ಲಾಮ್ ಮತದಲ್ಲಿದ್ದು ನಾವು ಮುಸ್ಲಿಮ್‌ರು ಎಂದು ತಿಳಿದು ತಟಸ್ಥವಾಗಿ ಜೀವನವನ್ನು ಸಾಗಿಸುವವರಿರುವಾಗ, ಕೆಲವರು ಮತವೊಂದರ ಧ್ಯಾಸದಲ್ಲಿ ಪೂರ್ತಿಯಾಗಿ ಮುಳುಗಿ, ತಮ್ಮ ಮತವೇ ಎಲ್ಲ ಮತಗಳಿಗಿಂತ ದೊಡ್ಡದೆಂದು ಪ್ರಚಾರ ಮಾಡುತ್ತಾ, ಇತರ ಮತಗಳಲ್ಲಿ ದೇವರು ತಿಳಿಯುವುದಿಲ್ಲವೆಂದು, ತಮ್ಮ ಮತದಲ್ಲೇ ದೇವರು ತಿಳಿಯುವನೆಂದು, ಇತರ

ಮತದವರನ್ನು ಸಹ ತಮ್ಮ ಮತದಲ್ಲಿ ಸೇರಿರೆಂದು, ಇದರಲ್ಲೇ ನಿಜವಾದ ದೈವ ಇದೆಯೆಂದು ಹೇಳುತ್ತಾ, ಮತವನ್ನೇ ಪ್ರಚಾರ ಮಾಡುತ್ತಿರುವರು. ಹೀಗೆ ಮೂರು ವಿಧಗಳ ಮನುಷ್ಯರು ಎಲ್ಲ ಮತಗಳಲ್ಲಿಯೂ ಇದ್ದಾರೆ.

ಪ್ರತಿ ಮತದಲ್ಲೂ ಈ ಮೂರು ವಿಧಗಳ ಮನುಷ್ಯರಿಗೆ ವಿಭಿನ್ನವಾಗಿ ಸಹ ಕೆಲವರು ಇರಬಹುದು. ಅವರು ತಮ್ಮ ಮತದಲ್ಲಿ ಇದ್ದರೆ ಲಾಭ ಇರುವುದಿಲ್ಲವೆಂದು, ತಮ್ಮ ಮತದಲ್ಲೇ ಇದ್ದರೇ ಕಷ್ಟಗಳು ತಪ್ಪುವುದಿಲ್ಲವೆಂದು ತಿಳಿದ ಅವರು ಇತರ ಮತದೊಳಕ್ಕೆ ಹೋದರೆ, ಆ ಮತದಲ್ಲಿನ ದೇವರು ಸುಖಗಳು ಕೊಡುತ್ತಾನೆಂದು, ಅದರಿಂದ ಕಷ್ಟಗಳು ಹೋಗುತ್ತವೆಂದು, ಇರುವ ಮತವನ್ನು ಬಿಟ್ಟು ಪರಮತದೊಳಕ್ಕೆ ಹೋದರೆ ಲಾಭ ಬರುತ್ತದೆಂದೋ, ಉದ್ಯೋಗ ಬರುತ್ತದೆಂದೋ, ಸುಖವಾಗಿ ಬದುಕಬಹುದೆಂದೋ ಹೀಗೆ ಅನೇಕ ಆಸೆಗಳಿಗೆ ಒಳಗಾಗಿ, ತಮ್ಮ ಮತವನ್ನು ಬಿಟ್ಟು ಇತರ ಮತದೊಳಕ್ಕೆ ಹೋಗುತ್ತಿದ್ದಾರೆ. ಕೆಲವರು ಇಂತಹ ಪ್ರಲೋಭಗಳಿಗೆ ಒಳಗಾಗಿ ಮತವನ್ನು ಬದಲಾಯಿಸಿಕೊಂಡರೆ, ಮತ್ತೆ ಕೆಲವರು ಪ್ರಲೋಭಗಳಿಗೆ ಆಸೆಪಡದಿದ್ದರೂ, ಇರುವ ಮತದೊಳಗಿನ ದೇವರಿಗಿಂತ ಇತರ ಮತದಲ್ಲಿನ ದೇವರು ದೊಡ್ಡವನೆಂದೋ, ಅಥವಾ ಇರುವ ಮತದಲ್ಲಿ ದೇವರ ಜ್ಞಾನ ಸರಿಯಾಗಿ ಇಲ್ಲವೆಂದೋ, ಮತವನ್ನು ಬದಲಾಯಿಸಿಕೊಂಡು ಇತರ ಮತದೊಳಗೆ ಹೋದರೆ, ದೇವರ ಜ್ಞಾನ ಚೆನ್ನಾಗಿ ತಿಳಿಯುತ್ತದೆಂದುಕೊಂಡು, ದೇವರಿಗೋಸ್ಕರ ಮತವನ್ನು ಬದಲಾಯಿಸುತ್ತಿದ್ದಾರೆ. ಅಂಥವರು ದೇವರ ಜ್ಞಾನದ ಮೇಲೆ ಇರುವ ಶ್ರದ್ಧೆಯಿಂದ ಮತವನ್ನು ಬದಲಾದರೂ, ಜ್ಞಾನದ ಮೇಲೆ ಶ್ರದ್ಧೆ ಇಲ್ಲದವರು ಸುಖಗಳಿಗೋಸ್ಕರ, ಲಾಭಗಳಿಗೋಸ್ಕರ ಮತವನ್ನು ಬದಲಾದರೂ ಇಬ್ಬರದೂ ತಪ್ಪೇ ಆಗುತ್ತದೆ. ದೇವರಿಗೋಸ್ಕರ ಮತವನ್ನು ಬದಲಾಯಿಸಿಕೊಂಡವನದ್ದು ದೈವದ್ರೋಹವಾದಾಗ, ಪ್ರಪಂಚ ಸುಖಗಳಿಗೋಸ್ಕರ ಮತವನ್ನು ಬದಲಾಯಿಸಿ ಕೊಂಡವನಿಗೆ ಮಹಾ ಪಾಪ ಬರುತ್ತದೆ. ಆ ವಿಧವಾಗಿ ಅವರು ಬೇರೆಬೇರೆ ಉದ್ದೇಶದಿಂದ ಮತವನ್ನು ಬದಲಾಯಿಸಿಕೊಳ್ಳುವುದರಿಂದ ದೇವರನ್ನು ಅವಮಾನಿಸಿದಂತಾಗುತ್ತಿದೆ. ದೇವರ ಮಾತನ್ನು ಅತಿಕ್ರಮಿಸಿ ನೀನು ದೇವರೇ

ಅಲ್ಲ ಹೋಗು! ಎನ್ನುವಂತಿದೆ. ಸುಖಗಳಿಗೋಸ್ಕರ ಮತವನ್ನು ಬದಲಾಯಿಸಿ ಕೊಂಡವನು ದೇವರನ್ನು ಅಗೌರವಪಡಿಸಿದಂತಾಗುವುದರಿಂದ ಆತನಿಗೆ ಪಾಪ ಬಂದಾಗ, ದೇವರ ಜ್ಞಾನಕ್ಕೋಸ್ಕರ ಮತವನ್ನು ಬದಲಾಯಿಸಿಕೊಂಡವನು ದೇವರ ಮಾತನ್ನು ಪೂರ್ತಿ ಧಿಕ್ಕರಿಸಿದಂತಾಗುತ್ತದೆ. ಅಗೌರವಕ್ಕಿಂತ ದೇವರ ಮಾತನ್ನು ಕೇಳದಂತೆ ಧಿಕ್ಕರಿಸುವುದು ದೊಡ್ಡ ತಪ್ಪಾಗುತ್ತದೆ ಆದ್ದರಿಂದ ಅದು ಪಾಪಕ್ಕಿಂತ ದೊಡ್ಡದಾಗಿ ದೈವದ್ರೋಹ ಆಗುತ್ತಿದೆ. ಆದರೇ ಮತ ಮಾರ್ಪಾಟಿನಲ್ಲಿ ಇಷ್ಟು ತತಂಗವಿದೆಯೆಂದು ತಿಳಿಯದವರು ಭಯವಿಲ್ಲದೇ ಮತವನ್ನು ಬದಲಾಗುತ್ತಿದ್ದಾರೆ.

ದೇವರು ಒಬ್ಬ ಮನುಷ್ಯನನ್ನು ಒಂದು ಮತದಲ್ಲಿ ಹುಟ್ಟಿಸಿ, ಆ ಮತಕ್ಕೆ ಒಂದು ದೈವ ಗ್ರಂಥವನ್ನು ಒದಗಿಸಿರುವಾಗ, ಯಾವ ಮತದಲ್ಲಿನವನು ಆ ಮತದಲ್ಲಿಯೇ ದೇವರನ್ನು, ದೇವರ ಜ್ಞಾನವನ್ನು ತಿಳಿಯುವ ಅವಕಾಶವಿರುವಾಗ, ದೇವರು ಕೊಟ್ಟಿರುವವುಗಳನ್ನು ಅಲ್ಲಗಳೆದು ಕೇವಲ ಪ್ರಪಂಚ ಸುಖಗಳಿಗೋಸ್ಕರ ಮತವನ್ನು ಬದಲಾಗುವುದರಿಂದ, ದೇವರು ಮಾಡಿದ ಕೆಲಸಗಳನ್ನು ಗೌರವಿಸದಂತೇ ಅಲ್ಲವೆ! ಆತನು ಮನುಷ್ಯನಿಗೆ ಜ್ಞಾನದ ಪ್ರಕಾರ ಎಷ್ಟೋ ಮೇಲು ಮಾಡುವುದಕ್ಕೆ ಯಾವ ಮತದಲ್ಲಿ ನಿನ್ನನ್ನು ಹುಟ್ಟಿಸಿದರೂ, ಅಲ್ಲಿ ದೈವ ಗ್ರಂಥವನ್ನು ಚಿಕ್ಕದನ್ನೋ, ದೊಡ್ಡದನ್ನೋ ಅಥವಾ ಮಧ್ಯದನ್ನೋ ಕೊಟ್ಟಿದ್ದಾನೆ. ಅವು ಚಿಕ್ಕ ದೊಡ್ಡವಾದರೂ ಎಲ್ಲಾ ಒಂದೇ ಜಾತಿಯವು ಆಗುವುದರಿಂದ ದೇವರ ಜ್ಞಾನ ಎಲ್ಲಿ ಯಾವ ಮತದಲ್ಲಿದ್ದರೂ ಅ ಮತ ಗ್ರಂಥದಿಂದ ತಿಳಿಯುತ್ತಿದೆ. ಅಂತಹ ಒಳ್ಳೆಯ ಅವಕಾಶವನ್ನು ಬಿಟ್ಟು, ಕೇವಲ ಪ್ರಪಂಚ ಸುಖಗಳಿಗೋಸ್ಕರ, ಪ್ರಪಂಚ ಲಾಭಗಳಿಗೆ ಮತವನ್ನು ಬಿಡುವುದು ದೇವರ ಉದ್ದೇಶಕ್ಕೆ ವಿರುದ್ಧವಾಗಿ ಮಾಡಿದಂತಾಗುತ್ತಿದೆ. ಆದ್ದರಿಂದ ಇರುವ ಮತವನ್ನು ಬಿಟ್ಟು ಯಾವ ಮತದೊಳಗೆ ಹೋದರೂ, ಅಲ್ಲಿಯೂ ಸಹ ಆ ಮತದಲ್ಲಿ ಸಹ ದೈವ ಗ್ರಂಥವೇ ಇದ್ದರೂ, ಮತ ಬದಲಾದವನಿಗೆ ಪಾಪ ಬರುತ್ತಿದೆ. ಇನ್ನು ದೇವರಿಗೋಸ್ಕರವಾಗಲೀ, ದೇವರ ಜ್ಞಾನಕ್ಕೋಸ್ಕರವಾಗಲೀ ಮತವನ್ನು ಬದಲಾಗುವುದರಿಂದ ಅವನ ಉದ್ದೇಶ, ಶ್ರದ್ಧೆ ಒಳ್ಳೆಯದೇ ಆದರೂ,

ಆತನ ಮೊದಲಿದ್ದ ಮತವೊಂದರ ದೈವ ಗ್ರಂಥವನ್ನು ಬಿಟ್ಟು ಬರುವುದರಿಂದ ಆ ಗ್ರಂಥವನ್ನು ನಿರಾಕರಿಸಿ ಅದರಲ್ಲಿ ಜ್ಞಾನವಿಲ್ಲವೆಂದು ಬಿಟ್ಟು ಬಂದಂತಾಗುತ್ತದೆ. ಆದ್ದರಿಂದ ಮೊದಲು ದೇವರುಕೊಟ್ಟಿರುವ ದೈವ ಗ್ರಂಥವನ್ನು ಬಿಟ್ಟು, ತಿರುಗಿ ಎರಡನೆ ಕಡೆ ಸಹ ದೇವರ ಗ್ರಂಥವನ್ನೇ ಆಶ್ರಯಿಸಿದರೂ, ಅದು ದೇವರ ಜ್ಞಾನವನ್ನು ಅಲ್ಲಗಳೆದಂತಾಗುತ್ತಿದೆ. ಉದಾಹರಣೆಗೆ ಖುರ್‌ಆನ್ ಗ್ರಂಥ ಇರುವ ಇಸ್ಲಾಮ್‌ನ್ನು ಬಿಟ್ಟು ಭಗವದ್ಗೀತೆವೊಂದರ ಹಿಂದೂಮತವನ್ನು ಆಶ್ರಯಿಸಿದರೂ, ಭಗವದ್ಗೀತೆ ಇರುವ ಹಿಂದೂಮತವನ್ನು ಬಿಟ್ಟು ಖುರ್‌ಆನ್ ಗ್ರಂಥವಿರುವ ಇಸ್ಲಾಮ್‌ನ್ನು ಆಶ್ರಯಿಸಿದರೂ ಆತನು ಮೊದಲ ಗ್ರಂಥವನ್ನು ಧಿಕ್ಕರಿಸಿ ದಂತಾಗುತ್ತದೆ. ಒಂದು ಮತದಲ್ಲಿದ್ದು ಆ ಮತ ಗ್ರಂಥದಲ್ಲಿನ ಜ್ಞಾನವನ್ನು ತಿಳಿಯದಿರುವಾಗ, ಇನ್ನೊಂದು ಮತದೊಳಕ್ಕೆ ಜ್ಞಾನಕ್ಕೋಸ್ಕರವೇ ಹೋದರೂ, ಅಲ್ಲಿರುವ ದೈವ ಗ್ರಂಥದಲ್ಲಿರುವ ಜ್ಞಾನ ಸಹ ಅರ್ಥವಾಗುವುದಿಲ್ಲ, ತಿಳಿಯುವುದಿಲ್ಲ. ಯಾವ ವಿಧವಾಗಿ ನೋಡಿದರೂ ಮತಮಾರ್ಪಾಟು ಒಂದು ವಿಧವಾಗಿ ದೈವದ್ರೋಹ ಆಗುತ್ತಿರುವಾಗ, ಮತ್ತೊಂದು ವಿಧವಾಗಿ ಮಹಾಪಾಪ ಆಗುತ್ತಿದೆ. ಮತವನ್ನು ಬದಲಾಯಿಸಬೇಡವೆಂದು ನಾನು ಹೇಳಿದಹಾಗೆ ಖುರ್‌ಆನ್ ಗ್ರಂಥದಲ್ಲಿ ಸಹ ದೇವರು ಹೇಳಿದ್ದಾನೆ. ಸೂರಾ ಐದು (5) ರಲ್ಲಿ 48ನೇ ವಾಕ್ಯದಲ್ಲಿ **"ನಾವು ನಿಮ್ಮ ಕಡೆಗೆ ಈ ಗ್ರಂಥವನ್ನು (ಖುರ್‌ಆನ್‌ನನ್ನು) ಸತ್ಯಸಮೇತವಾಗಿ ಅವತರಿಸುವಂತೆ ಮಾಡಿದ್ದೇವೆ. ಇದು ತನಗಿಂತ ಮೊದಲು ಬಂದಿರುವ ಗ್ರಂಥಗಳನ್ನು ಸತ್ಯವೆಂದು ಧೃಢೀಕರಿಸುತ್ತಿದೆ. ನಿನ್ನ ಹತ್ತಿರಕ್ಕೆ ಬಂದಿರುವ ಈ ಸತ್ಯವನ್ನು ಬಿಟ್ಟು ಅವರ ಮನೋಭಾವನೆಗಳನ್ನು ಅನುಸರಿಸಬೇಡ"** ಎಂದು ಹೇಳಿದ್ದಾರೆ. ಇದರ ಅರ್ಥ ಇತರರ ಮಾತುಗಳು ಕೇಳಿ ನಿನಗೆ ಕೊಟ್ಟಿರುವ ಸತ್ಯವಾದ ಜ್ಞಾನವನ್ನು ಬಿಟ್ಟು ಅವರ ಮನೋಭಾವನೆಗಳ ಪ್ರಕಾರ ಹೋಗಬೇಡ ಎಂದು ಹೇಳಿದ್ದಾರೆ. ಅಂದರೆ ಇತರರು ಹೇಳಿದಂತೆ ಕೇಳಿ ಮತ ಬದಲಾಯಿ ಸಬೇಡ ಎಂದೇ ಅಲ್ಲವೆ ಅರ್ಥ. ಅಂತಿಮ ದೈವ ಗ್ರಂಥವಾದ ಖುರ್‌ಆನ್‌ನಲ್ಲಿ ದೇವರು ಮತ ಮಾರ್ಪಾಟನ್ನು ಹೇಗೆ ವಿರೋಧಿಸಿದ್ದಾನೋ ನಿಮಗೆ ಅರ್ಥವಾಗಿದೆಯೆಂದುಕೊಳ್ಳುತ್ತೇನೆ.

ಕೆಲವರು ಎಲ್ಲ ಮತಗಳ ಜ್ಞಾನಕ್ಕಿಂತ ನನ್ನ ಮತದಲ್ಲಿನ ಜ್ಞಾನವೇ ದೊಡ್ಡದೆಂದು ಅಂದುಕೊಳ್ಳುತ್ತಾ, ಇತರ ಮತಗಳೊಳಗೆ ಬದಲಾಗದಂತೆ, ದೇವರು ಹುಟ್ಟಿನಿಂದ ಕೊಟ್ಟಿರುವ ಮತದಲ್ಲೇ ಇರುವ, ತನ್ನ ಮತ ಗ್ರಂಥದಲ್ಲಿನ ಜ್ಞಾನವನ್ನೇ ಚೆನ್ನಾಗಿ ಓದಿಕೊಳ್ಳುತ್ತಾ, ಅದರಿಂದ ದೇವರನ್ನು ತಿಳಿದುಕೊಳ್ಳುತ್ತಾ ಇತರ ಮತದೂಷಣೆ ಮಾಡದಂತೆ ಯಾರ ಮತ ಅವರದೆನ್ನುವ ಉದ್ದೇಶದಿಂದ ಇತರ ಮತಗಳನ್ನು ಕುರಿತು ಕೆಟ್ಟದಾಗಿ ಆಗಲೀ, ಒಳ್ಳೆಯದಾಗಿ ಆಗಲೀ ಮಾತನಾಡದೆ ತನ್ನ ಮತದಲ್ಲಿ ತಾನಿದ್ದು, ತನ್ನ ಮತ ಗ್ರಂಥವನ್ನು ತಾನು ತಿಳಿದುಕೊಳ್ಳುತ್ತಾ ಇದ್ದ ಮನುಷ್ಯನನ್ನು ಕುರಿತು ದೇವರು ಏನು ಹೇಳುತ್ತಿದ್ದಾನೆಂದರೆ, ಒಂದು ಮತದಲ್ಲೇ ಇರುತ್ತಾ ಆ ಮತವೊಂದರ ಗ್ರಂಥವನ್ನೇ ನೋಡಿ ಜ್ಞಾನವನ್ನು ತಿಳಿಯುವುದು ಒಳ್ಳೆಯ ಪದ್ಧತಿ ಆದರೂ, ಅದರಿಂದ ದೇವರ ಸ್ವರೂಪ ತಿಳಿಯುತ್ತದಾಗಲೀ, ಸ್ವರೂಪದಲ್ಲಿನ ಅಂದ ತಿಳಿಯುವುದಿಲ್ಲ. ಆಕೃತಿ ಕಾಣಿಸಿ ಅಂದ ಕಾಣಿಸದಂತೆ ಹೋದರೆ ಸಂಪೂರ್ಣ ತೃಪ್ತಿ ಇರುವುದಿಲ್ಲ ಅಲ್ಲವೆ! ಹಾಗೇ ಒಂದೇ ಗ್ರಂಥವನ್ನು ಆಶ್ರಯಿಸಿ ಜ್ಞಾನವನ್ನು ತಿಳಿದರೂ, ಅದರಲ್ಲಿ ಸ್ವಲ್ಪ ಅಸಂಪೂರ್ಣತೆ ಇರುತ್ತದೆ. ಪೂರ್ತಿ ಸಂಪೂರ್ಣತೆ ಬೇಕೆಂದರೆ, ಬೇಗ ದೇವರೊಳಗೆ ಐಕ್ಯವಾಗಿ ಮೋಕ್ಷ ಹೊಂದಬೇಕೆಂದರೆ ದೇವರು ಹೇಳಿದ ಮೂರು ಗ್ರಂಥಗಳ ಸಾರಾಂಶ ತಿಳಿಯುವುದು ಒಳ್ಳೆಯದು. ಒಂದು ದೈವ ಗ್ರಂಥವನ್ನು ಓದಿದರೂ ದೇವರು ತಿಳಿಯುವನು. ಆದರೇ ಇನ್ನೂ ಜ್ಞಾನದಲ್ಲಿ ಎಲ್ಲಾದರೂ ಸಂಶಯಗಳು ಬರಬಹುದು. ಹಾಗಾಗದೆ ಇರುವುದಕ್ಕೆ ದೇವರು ನಮಗೆ ಒಂದು ಸಲಹೆ ಕೊಡುತ್ತಿದ್ದಾನೆ. ಪ್ರಥಮ ದೈವಗ್ರಂಥದಲ್ಲಿ ಜ್ಯೋತಿ ಇದೆಯೆಂದು, ತೌರಾತು ಗ್ರಂಥವಾದ ಅದನ್ನು ಆಧಾರ ಮಾಡಿಕೊಂಡು ಮುಸ್ಲಿಮ್‌ರಾದ ಪ್ರವಕ್ತರು, ರಬ್ಬಾನೀಗಳು, ಧರ್ಮವೇತ್ತರು ಯೂದರ ಸಮಸ್ಯೆಗಳನ್ನು ಪರಿಷ್ಕರಿಸುವವರೆಂದು ಖುರ್‌ಆನ್ ಗ್ರಂಥದಲ್ಲಿ ಐದನೆ ಸೂರಾ, 44ನೇ ವಾಕ್ಯದಲ್ಲಿ ಇದೆ. ಆದ್ದರಿಂದ ಅಂತಿಮ ದೈವಗ್ರಂಥವನ್ನು ಹೊಂದಿದವರು ಮೊದಲು ಬಂದಿರುವ ಗ್ರಂಥವನ್ನು ನೋಡಿ ಅಸೂಯೆಪಡಬಹುದು. ಹಾಗೆ ಅಲ್ಲದೆ ಮೊದಲು ಬಂದಿರುವ ಪ್ರಥಮ ದೈವ ಗ್ರಂಥವನ್ನು, ದ್ವಿತೀಯ

ದೈವಗ್ರಂಥವನ್ನು ತಿಳಿದ ದಿನ ನೀವು ನಿಮ್ಮ ಧರ್ಮದ ಮೇಲೆ ಇದ್ದಂತೆ. ಅಲ್ಲಿಯವರೆಗು ನೀವು ನಿಮ್ಮ ಧರ್ಮದ ಮೇಲೆ ಇಲ್ಲದಂತೆ ಎಂದಿದ್ದಾನೆ. ಇದೇ ವಿಷಯವನ್ನು ಖುರ್‌ಆನ್ ಗ್ರಂಥದಲ್ಲಿ ಐದನೇ ಸೂರಾ, 68ನೇ ಆಯತ್‌ನಲ್ಲಿ ಹೀಗೆ ಇದೆ ನೋಡಿ. **"ಓ ಗ್ರಂಥವಹಿಗಳೇ! ನೀವು ತೌರಾತನ್ನೂ, ಇಂಜೀಲನ್ನೂ (ಭಗವದ್ಗೀತೆಯನ್ನು, ಬೈಬಲ್‌ನ್ನು) ನಿಮ್ಮ ಪ್ರಭು ಪರವಾಗಿ ನಿಮ್ಮ ಹತ್ತಿರಕ್ಕೆ ಕಳುಹಿಸಿರುವುದನ್ನು (ಖುರ್‌ಆನ್ ಗ್ರಂಥವನ್ನು) ನಿಮ್ಮ ಜೀವನಗಳಲ್ಲಿ ನೆಲೆಗೊಳಿಸದವರೆಗು ನೀವು ಯಾವ ಧರ್ಮದ ಮೇಲೂ ಇಲ್ಲದಂತೆ"** ಈ ಮಾತು ಪ್ರತ್ಯೇಕಿಸಿ ಮುಸ್ಲಿಮ್‌ರಿಗೆ ಹೇಳಿದ ಮಾತಾದರೂ, ಹಿಂದೂಗಳು, ಕ್ರೈಸ್ತರು ಸಹ ಉಳಿದ ಗ್ರಂಥಗಳಲ್ಲಿನ ಧರ್ಮಗಳನ್ನು ತಿಳಿದರೆ ಸಂಪೂರ್ಣವಾಗಿ ದೇವರನ್ನು ತಿಳಿದಂತಾಗುತ್ತದೆಂದು ನನ್ನ ಭಾವನೆ.

ಆದ್ದರಿಂದ ಪ್ರತಿ ಮನುಷ್ಯ ತನ್ನ ಮತವನ್ನೂ, ತನ್ನ ಮತ ಗ್ರಂಥವನ್ನೂ ಗೌರವಿಸಿದಂತೇ ಉಳಿದ ಮತಗಳಲ್ಲಿನ ಗ್ರಂಥಗಳನ್ನು ಸಹ ದೇವರೇ ಕೊಟ್ಟಿದ್ದಾನೆಂದು ತಿಳಿದು ಅವುಗಳಲ್ಲಿ ಸಹ ಏನಿದೆಯೋ ತಿಳಿದ ದಿನ, ಮತಗಳ ಮೇಲೆ ಇರುವ ಅಪೋಹಗಳು ಇಲ್ಲದಂತೆ ಹೋಗುತ್ತದೆ. ಅದರಿಂದ ಮತ ಸಾಮರಸ್ಯ ಏರ್ಪಡುತ್ತದೆ. ಮತ ಮಾರ್ಪಾಟುಗಳೊಂದಿಗೆ ಕೆಲಸ ಇಲ್ಲದಂತೆ ಹೋಗುತ್ತದೆ. ಪರಮತದಲ್ಲಿ ಇರುವ ಜ್ಞಾನ, ಧರ್ಮ ತನ್ನ ಮತದಲ್ಲಿದೆಯೆಂದು ತಿಳಿದ ದಿನ ಮನುಷ್ಯ ಯಾವ ಮತದಲ್ಲಿರುವವನು ಆ ಮತದಲ್ಲೇ ಇರಬಲ್ಲನು. **ಮತವನ್ನು ಖತಂ ಮಾಡಿ, ಘತವನ್ನು ರಥವಾಗಿ ಬದಲಾಯಿಸಿಕೊಂಡರೇ, ಮೋಕ್ಷ ಗಮ್ಯವನ್ನು ಬೇಗ ಸೇರಬಲ್ಲೆವು.**

**ಮುಕ್ತಾಯ**

*****

**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರ ಎಷ್ಟು ಅವಶ್ಯವೋ, ಹಾಗೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರ ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲವೆಂದರೂ ಅದು ಅಸತ್ಯವಲ್ಲ.**

ತಪ್ಪದೆ ಓದಿರಿ!

# ಶ್ರೀ ಕೃಷ್ಣನು ದೇವರಾ – ಭಗವಂ

ಈ ಗ್ರಂಥದಿಂದ ಕೃಷ್ಣನೆಂದರೇ ಏನೋ ಯಾರೋ ತಿಳಿದುಹೋಗುವುದು. ದೈವ
ತೆಗೆದುಕೊಳ್ಳುವನು ಎನ್ನುವುದಕ್ಕೆ ಇದು ಒಂದು ನಿದರ್ಶನ. ಇದರಿಂದ ಎಷ್ಟೋ ಜ್ಞಾನವನ
ಅಲ್ಲದೇ, ಇಲ್ಲಿಯವರೆಗೂ ತಿಳಿಯದ ಆಧ್ಯಾತ್ಮಿಕ ರಹಸ್ಯಗಳೆಷ್ಟೋ ತಿಳಿಯುವುದು. ಈ
ಬೇರೆ, ಭಗವಂತನು ಬೇರೆಯೆಂದು ತಿಳಿಯುತ್ತಿದೆ. ಕೃಷ್ಣನು ಮನುಷ್ಯನೇ ಆದರೂ
ನಡೆದ ರಹಸ್ಯ ಇಲ್ಲಿಯವರೆಗೂ ಯಾರಿಗೂ ತಿಳಿದಿಲ್ಲ. ಆತನ ಮರಣ ರಹಸ್ಯವ
ತಿಳಿದುಕೊಂಡರೇ ಭೂಮಿ ಮೇಲೆ ಮತ ಭೇದಗಳು ಯಾವ ಮಾತ್ರ ಇರುವುದಿ
ಮಾಯವಾಗಿ ಹೋಗುತ್ತವೆ.

ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ **ಆಚಾರ್ಯ ಪ್ರಬೋಧ**

ಓದಿಸಿರಿ!!

# ದೇವಾಲಯ ರಹಸ್ಯಗಳು

ಲ್ಲಿ ಭಾರತದೇಶ ಆಧ್ಯಾತ್ಮಿಕಕ್ಕೆ ಹುಟ್ಟಿದ ಮನೆಯಂತೆ ಹೇಳಿದ್ದರೂ ದಕ್ಷಿಣ ಭಾರತದೇಶ ಸ್ವಚ್ಛವಾದ
ನಂತಹದು. ದಕ್ಷಿಣ ಭಾರತದೇಶದಲ್ಲಿ ನಿರ್ಮಿಸಲಾಗಿರುವ ದೇವಾಲಯಗಳು, ಸೃಷ್ಟಿ ಆದಿಯಲ್ಲಿ
ಳಾಗಿ ಮತ್ತು ಸಂದೇಶಗಳಾಗಿ ಪ್ರಕಾಶಿಸುತ್ತಿವೆ. ದೇವಾಲಯಗಳಲ್ಲಿನ ವಿಧಿವಿಧಾನಗಳಿಗೆ ಸರಿಯಾದ

ಹಿಂದೂ ಪದಕ್ಕೆ ನಿರ್ವಚನ ತಿಳಿಯದೆಂದು ಕೇಂದ್ರ ಹೋಂಶಾಖ ತಿಳಿಸಿತು. ಹಿಂದೂ ಪದದ ನಿರ್ವಚನ ಹೇಳಬೇಕೆಂದು ಮಧ್ಯಪ್ರದೇಶ್‌ಗೆ ಸೇರಿದ ಚಂದ್ರ ಶೇಖರ್ ಗೌರ್ ಎಂಬ ವ್ಯಕ್ತಿ ಸಮಾಚಾರ ಹಕ್ಕಿನ ಕಾನೂನಿಗೆ ಮಾಡಿಕೊಂಡ ಪಿಟೀಷನ್‌ಗೆ ಉತ್ತರ ಕೊಡುತ್ತಾ ಹೋಂಶಾಖೆ ಮೇಲಿನ ರೀತಿಯಲ್ಲಿ ಸ್ಪಂದಿಸಿತು. ಆ ಪದಕ್ಕೆ ಸಂಬಂಧಿಸಿದ ಎಂತಹ ಸಮಾಚಾರ ಇಲ್ಲವೆಂದು ಕೇಂದ್ರ ಪೌರ ಸಂಬಂಧಗಳ ಶಾಖಾಧಿಕಾರಿ ಗುರತಿಸಿದಂತೆ ಕೇಂದ್ರ ತಿಳಿಸಿತು. ಎಂತಹ ನಿರ್ವಚನ ಇಲ್ಲದಿರುವಾಗ ಇಂತಹ ವರ್ಗದವರು ಹಿಂದೂಗಳೆಂದು ಹೇಗೆ ನಿರ್ಧಾರಿಸುತ್ತಿದ್ದೀರೆಂದು, ದೇಶದಲ್ಲಿ ಹಿಂದೂಗಳು ಮೆಜಾರಿಟೀಯಾಗಿ ಇದ್ದಾರೆಂದು ಹೇಗೆ ಹೇಳುತ್ತಿದ್ದೀರೆಂದು ಗೌರ್ ಪ್ರಶ್ನಿಸಿದ್ದಾರೆ.

ಓದಿಸಿರಿ!!

# ದ್ರಾವಿಡ ಬ್ರಾಹ್ಮಣ

ಭಾರತದೇಶ ಸ್ಥಿತಿಯನ್ನು ಕಣ್ಣಿಗೆ ಕಾಣಿಸುವಂತೆ ಶಾಸ್ತ್ರಬದ್ಧವಾಗಿ ವಿವರಿಸುತ್ತಾ, ಭಾರತದೇಶವನ್ನೇ ದ್ರಾವಿಡ ದೇಶವೆನ್ನುತ್ತಿದ್ದರೆಂಬ ವಿಷಯವನ್ನು ತಿಳಿಸುತ್ತಾ, ದೈವಜ್ಞಾನ ತಿಳಿದ ವ್ಯಕ್ತಿಯನ್ನು ಬೇಕೆಂದು ತಿಳಿಸುತ್ತಾ, ತ್ರೈತ ಸಿದ್ಧಾಂತ ತಿಳಿದ ಜ್ಞಾನಿಯನ್ನೇ ದ್ರಾವಿಡ ಬ್ರಾಹ್ಮಣ ಎನ್ನಬೇಕೆಂದು

ಪ್ರಮುಖರ ಲೇಖೆ



# ಇಂದೂ ದೇಶವೇ ಇಂಡಿಯಾ!

**ಹಿ**ಮಾಲಯಗಳಿಗೂ, ವಿಂಧ್ಯ ಪರ್ವತಗಳಿಗೂ ಮಧ್ಯದಲ್ಲಿ ಆದಿನದ ಆರ್ಯಾವರ್ತನ (ಆರ್ಯರ ಭೂಭಾಗ) ಎಲ್ಲಿ ಇದೆಯೋ ನಮ್ಮ ದೇಶಪಟದಲ್ಲಿ ನೀನು ನೋಡಿದ್ದೀಯ. ಅದು ಬಾಲ ಚಂದ್ರಾಕಾರದಲ್ಲಿ ಇರುವಂತೆ ಕಾಣಿಸುತ್ತದೆ. ಅದಕ್ಕೇ ಆರ್ಯಾವರ್ತನಕ್ಕೆ ಇಂದೂ ದೇಶವೆಂದು ಹೆಸರು ಬಂದಿದೆ. ಇಂದೂ ದೇಶವೇ ಹಿಂದೂ ದೇಶವಾಗಿ ಮಾರ್ಪಾಟಾಗಿದೆ.

ರಾಮಯಣ ಹುಟ್ಟಿದ ದೀರ್ಘ ಕಾಲಕ್ಕೆ ಮಹಾಭಾರತ ಹುಟ್ಟಿದೆ. ಅದು ರಾಮಾಯಣಕ್ಕಿಂತ ದೊಡ್ಡ ಗ್ರಂಥ. ಅದರಲ್ಲಿ ಹೇಳಿರುವುದು ಆರ್ಯ ದ್ರಾವಿಡ ಯುದ್ಧವಲ್ಲ. ಆರ್ಯರ ಮಧ್ಯ ಏರ್ಪಟ್ಟ ಕುಟುಂಬ ಕಲಹವೇ ಭಾರತಕಥೆ. ಭಾರತದಲ್ಲಿ ಹೇಳಿದ ಕಥೆಗಳು, ಧರ್ಮಗಳು ಅಷ್ಟಿಷ್ಟಲ್ಲ. ಅವು ಬಹಳ ಸುಂದರವಾಗಿ, ಗಂಭೀರವಾಗಿ ಇರುತ್ತವೆ. ಇವೆಲ್ಲವುಗಳಿಗಿಂತ ದೊಡ್ಡದಾದ ಭಗವದ್ಗೀತೆ ಎಂಬ ಮಹಾಗ್ರಂಥ ಮಹಾಭಾರತದಲ್ಲಿ ಇರುವ ಕಾರಣದಿಂದ ಅದು ನಮ್ಮೆಲ್ಲರಿಗೂ ಪ್ರಿಯತಮ ವಾದದ್ದಾಗಿದೆ. ಸಾವಿರ ವರ್ಷಗಳ ಕೆಳಗೇ ನಮ್ಮ ದೇಶದಲ್ಲಿ ಇಂತಹ ವಿಶೇಷವಾದ ಗ್ರಂಥಗಳು ಹುಟ್ಟಿವೆ. ಮಹಾನುಭಾವರೇ ಇವುಗಳನ್ನು ಬರೆದಿರುತ್ತಾರೆ. ಈ ಗ್ರಂಥಗಳು ಹುಟ್ಟಿ ಇಷ್ಟು ಕಾಲ ಕಳೆದರೂ ಅವುಗಳನ್ನು ಕುರಿತು ತಿಳಿದುಕೊಳ್ಳದಂತಹ ಮಕ್ಕಳು ಮತ್ತು ಪ್ರಯೋಜನವನ್ನು ಪಡೆಯದ ಹಿರಿಯರಂತೂ ಇರುವುದಿಲ್ಲ.

ನೆಹ್ರೂ ಇಂದಿರಗೆ ಬರೆದ ಲೇಖನೆಯಿಂದ

# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ**
} ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

- ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.
- ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.
- ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.
- ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.
- ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)
- ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

---

**visit website : www.thraithashakam.org**

**1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.**

**2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.**

**3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.**

**4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.**

**5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.**

**6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.**

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

**(Regd.No.: 304/1991)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ
ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ
**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**
**(Regd.No.: /2015)**
ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),
ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381
e-mail id : info@dravidashreshtisangham.org

***www.dravidashreshtisangham.org***

# ಮತ ಮಾರ್ಪಾಟು
# ದೈವದ್ರೋಹ
# ಮಹಾ ಪಾಪ



Author :
The Only Guru of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org